

# ಕನ್ನಡ ಸಾಹಿತ್ಯ

8
ಸಂಚಿಕೆ

## ಸ್ನಾತಕೋತ್ತರ ಪದವಿ ಪೂರ್ವಸಿದ್ಧತಾ ಕಾರ್ಯಕ್ರಮ

475

# ಎಂಪಿಪಿ

# MPP

MASTER'S PREPARATORY PROGRAMME

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

ಮಾನಸ ಗಂಗೋತ್ರಿ, ಮೈಸೂರು - 570 006

ಉನ್ನತ ಶಿಕ್ಷಣಕ್ಕಾಗಿ ಇರುವ ಅವಕಾಶಗಳನ್ನು ಹೆಚ್ಚಿಸುವುದಕ್ಕೆ ಮತ್ತು ಶಿಕ್ಷಣವನ್ನು ಪ್ರಜಾತಂತ್ರೀಕರಿಸುವುದಕ್ಕೆ ಮುಕ್ತ ವಿಶ್ವವಿದ್ಯಾನಿಲಯ ವ್ಯವಸ್ಥೆಯನ್ನು ಆರಂಭಿಸಲಾಗಿದೆ.

**ರಾಷ್ಟ್ರೀಯ ಶಿಕ್ಷಣ ನೀತಿ 1986**

*The Open University system has been initiated in order to augment opportunities for higher education and as instrument of democrating education.*

***National Education Policy 1986***

ಮುಕ್ತ ವಿಶ್ವವಿದ್ಯಾನಿಲಯವು ದೂರಶಿಕ್ಷಣ ಪದ್ಧತಿಯಲ್ಲಿ ಬಹುಮಾಧ್ಯಮಗಳನ್ನು ಉಪಯೋಗಿಸುತ್ತದೆ. ............................ವಿದ್ಯಾಕಾಂಕ್ಷಿಗಳನ್ನು ಜ್ಞಾನ ಸಂಪಾದನೆಗಾಗಿ ಕಲಿಕಾ ಕೇಂದ್ರಕ್ಕೆ ಕೊಂಡೊಯ್ಯುವ ಬದಲು, ಜ್ಞಾನ ಸಂಪತ್ತನ್ನು ವಿದ್ಯೆ ಕಲಿಯುವವರ ಬಳಿ ಕೊಂಡೊಯ್ಯುವ ವಾಹಕವಾಗಿದೆ.

**ಡಾ. ಕುಳಂದೈಸ್ವಾಮಿ**

*"The Open University system makes use of Multimedia in distance education system. ............................ it is vehicle which transports knowledge to the place of learners rather than transport to the place of learning.*

***Dr. Kulandai Swamy***

## ವಿಶ್ವಮಾನವ ಸಂದೇಶ

ಪ್ರತಿಯೊಂದು ಮಗುವು ಹುಟ್ಟುತ್ತಲೇ - ವಿಶ್ವಮಾನವ. ಬೆಳೆಯುತ್ತಾ ನಾವು ಅದನ್ನು 'ಅಲ್ಪ ಮಾನವ'ನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು 'ವಿಶ್ವಮಾನವ'ನನ್ನಾಗಿ ಮಾಡುವುದೇ ವಿದ್ಯೆಯ ಕರ್ತವ್ಯವಾಗಬೇಕು.

ಮನುಜ ಮತ, ವಿಶ್ವ ಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ ಈ ಪಂಚಮಂತ್ರ ಇನ್ನು ಮುಂದಿನ ದೃಷ್ಟಿಯಾಗಬೇಕಾಗಿದೆ. ಅಂದರೆ, ನಮಗೆ ಇನ್ನು ಬೇಕಾದುದು ಆ ಮತ ಈ ಮತ ಅಲ್ಲ; ಮನುಜ ಮತ. ಆ ಪಥ ಈ ಪಥ ಅಲ್ಲ; ವಿಶ್ವ ಪಥ. ಆ ಒಬ್ಬರ ಉದಯ ಮಾತ್ರವಲ್ಲ; ಸರ್ವರ ಸರ್ವಸ್ತರದ ಉದಯ. ಪರಸ್ಪರ ವಿಮುಖವಾಗಿ ಸಿಡಿದು ಹೋಗುವುದಲ್ಲ; ಸಮನ್ವಯಗೊಳ್ಳುವುದು. ಸಂಕುಚಿತ ಮತದ ಆಂಶಿಕ ದೃಷ್ಟಿ ಅಲ್ಲ; ಭೌತಿಕ ಪಾರಮಾರ್ಥಿಕ ಎಂಬ ಭಿನ್ನದೃಷ್ಟಿ ಅಲ್ಲ; ಎಲ್ಲವನ್ನು ಭಗವದ್ ದೃಷ್ಟಿಯಿಂದ ಕಾಣುವ ಪೂರ್ಣದೃಷ್ಟಿ.

ಕುವೆಂಪು

## *Gospel of Universal Man*

Every Child, at birth, is the universal man. But, as it grows, we turn it into "a petty man". It should be the function of education to turn it again into the enlightened "universal man".

The Religion of Humanity, the Universal Path, the Welfare of All, Reconciliation, the Integral Vision- these ***five mantras*** should become View of the Future. In other words, what we want henceforth is not this religion or that religion, but the Religion of Humanity ; not this path or that path, but the Universal Path ; not the well-being of this individual or that individual, but the Welfare of All ; not turning away and breaking off from one another, but reconciling and uniting in concord and harmony ; and, above all, not the partial view of a narrow creed, not the dual outlook of the material and the spiritual, but the Integral Vision of seeing all things with the eye of the Divine.

***Kuvempu***



ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ
ಮಾನಸ ಗಂಗೋತ್ರಿ
ಮೈಸೂರು - 570 006

ಎಂ.ಪಿ.ಪಿ.
ಕನ್ನಡ ಸಾಹಿತ್ಯ

| ಸಂಚಿಕೆಗಳು | ವಿಷಯಗಳು | |
|---|---|---|
| 1 | ಕನ್ನಡ ಸಾಹಿತ್ಯ ಚರಿತ್ರೆ<br>ಹಳಗನ್ನಡ ಸಾಹಿತ್ಯ<br>ಚಂಪೂ ಸಾಹಿತ್ಯ - ವಚನ ಸಾಹಿತ್ಯ | ಘಟಕ - 1 ಕನ್ನಡ ಸಾಹಿತ್ಯದ ಪ್ರಾಚೀನತೆ<br>ಘಟಕ - 2 ಗದ್ಯ: ನಾಗವರ್ಮ, ನಾಗಚಂದ್ರ, ನಯಸೇನ, ನೇಮಿಚಂದ್ರ, ರುದ್ರಭಟ್ಟ, ಜನ್ನ ಮತ್ತು ಆಂಡಯ್ಯ<br>ಘಟಕ - 3 ವಚನ ಸಾಹಿತ್ಯ : ಹಿನ್ನೆಲೆ, ಉಗಮ, ಬೆಳವಣಿಗೆ, ಲಕ್ಷಣ<br>ಘಟಕ - 4 ಪ್ರಮುಖ ವಚನಕಾರರು, ವಚನ ಸಾಹಿತ್ಯದ ಕೊಡುಗೆ |
| 2 | ಕನ್ನಡ ಸಾಹಿತ್ಯ ಚರಿತ್ರೆ<br>ನಡುಗನ್ನಡ ಸಾಹಿತ್ಯ | ಘಟಕ - 1 ರಗಳೆ : ಸ್ವರೂಪ, ಪ್ರಭೇದಗಳು<br>ಘಟಕ - 2 ಕವಿ ಹರಿಹರ ಮತ್ತು ಆತನ ಕೃತಿಗಳು<br>ಘಟಕ - 3 ಷಟ್ಪದಿ ಸಾಹಿತ್ಯ - ಪರಿಚಯ, ರಾಘವಾಂಕ : ಕವಿ, ಕೃತಿಗಳು<br>ಘಟಕ - 4 ಷಟ್ಪದಿ ಕವಿಗಳು : ಕುಮಾರವ್ಯಾಸ, ಚಾಮರಸ, ಕುಮಾರವಾಲ್ಮೀಕಿ |
| 3 | ಕನ್ನಡ ಸಾಹಿತ್ಯ ಚರಿತ್ರೆ<br>ನಡುಗನ್ನಡ ಸಾಹಿತ್ಯ | ಘಟಕ - 1 ದಾಸ ಸಾಹಿತ್ಯ : ಶ್ರೀಪಾದರಾಜರು, ಪುರಂದರ, ಕನಕ, ಜಗನ್ನಾಥದಾಸರು ಮೊದಲಾದವರು<br>ಘಟಕ - 2 ತ್ರಿಪದಿ ಸಾಹಿತ್ಯ : ಪರಿಚಯ, ಸರ್ವಜ್ಞ ಕವಿ<br>ಘಟಕ - 3 ಸಾಂಗತ್ಯ ಸಾಹಿತ್ಯ - ೧ : ದೇಪರಾಜ, [illegible], ನಿಜಗುಣಶಿವಯೋಗಿ, ಕನಕದಾಸರು<br>ಘಟಕ - 4 ಸಾಂಗತ್ಯ ಸಾಹಿತ್ಯ - ೨ : ನಂಜುಂಡ ಕವಿ, ರತ್ನಾಕರವರ್ಣಿ, ಸಂಚಿಯ ಹೊನ್ನಮ್ಮ |
| 4 | ಕನ್ನಡ ಸಾಹಿತ್ಯ ಚರಿತ್ರೆ<br>ಆಧುನಿಕ ಕನ್ನಡ ಸಾಹಿತ್ಯ | ಘಟಕ - 1 ಹೊಸಗನ್ನಡದ ಅರುಣೋದಯ : ಭಾಗ - ೧<br>ಘಟಕ - 2 ಹೊಸಗನ್ನಡ ಅರುಣೋದಯ : ಭಾಗ - ೨<br>ಘಟಕ - 3 ನವೋದಯ ಮತ್ತು ಪ್ರಗತಿಶೀಲ ಸಾಹಿತ್ಯ<br>ಘಟಕ - 4 ನವ್ಯ ಮತ್ತು ದಲಿತ ಬಂಡಾಯ ಸಾಹಿತ್ಯ |
| 5 | ಕನ್ನಡ ಸಾಹಿತ್ಯ ಚರಿತ್ರೆ<br>ಆಧುನಿಕ ಕನ್ನಡ ಸಾಹಿತ್ಯ | ಘಟಕ - 1 ಭಾವಗೀತೆ, ಕಾದಂಬರಿ<br>ಘಟಕ - 2 ಸಣ್ಣ ಕಥೆ : ಸ್ವರೂಪ, ಲಕ್ಷಣ ಮತ್ತು ಇತಿಹಾಸ<br>ಘಟಕ - 3 ನಾಟಕ : ವಸ್ತು, ಸಂವಿಧಾನ, ರಂಗಭೂಮಿ, ನಾಟಕ ಪರಂಪರೆ<br>ಘಟಕ - 4 ಪ್ರಬಂಧ, ವಿಮರ್ಶೆ |
| 6 | ಛಂದಸ್ಸು | ಘಟಕ - 1 ಲಯ, ಯತಿ, ಪ್ರಾಸ, ಪಾದ, ಮಾತ್ರಾಗಣ ಸ್ವರೂಪ, ಕನ್ನಡ ಛಂದೋಗ್ರಂಥಗಳ ಪರಿಚಯ<br>ಘಟಕ - 2 ವರ್ಣವೃತ್ತಗಳು, ಖ್ಯಾತ ಕರ್ಣಾಟಕಗಳು, ಮಾತ್ರಾವೃತ್ತಗಳು, ಕಂದ, ರಗಳೆ, ಅಂಶವೃತ್ತಗಳು<br>ಘಟಕ - 3 ಹೊಸಗನ್ನಡ ಛಂದಸ್ಸು - ೧ : ಗಣವಿನ್ಯಾಸ, ಪ್ರಯೋಗಗಳು, ಸ್ವರಾಘಾತ, ಗಣಪರಿವೃತ್ತಿ<br>ಘಟಕ - 4 ಹೊಸಗನ್ನಡ ಛಂದಸ್ಸು - ೨ : ಮಾತ್ರೆ, ಮಂಡಿ, ಪದ್ಯಗಣ |
| 7 | ಭಾರತೀಯ ಕಾವ್ಯಮೀಮಾಂಸೆ | ಘಟಕ - 1 ಮೀಮಾಂಸೆಯ ಉಗಮ, ಕಾವ್ಯದ ಆಕರ, ಪರಿಕರ, ಸಹೃದಯ, ಕಾವ್ಯ ಲಕ್ಷಣ ಇತ್ಯಾದಿ<br>ಘಟಕ - 2 ಪ್ರಸ್ಥಾನಗಳು : ಅಲಂಕಾರ, ರೀತಿ, ಧ್ವನಿ, ಔಚಿತ್ಯ, ಮೀಮಾಂಸಕರು<br>ಘಟಕ - 3 ಧ್ವನಿ ಸಿದ್ಧಾಂತ, ಧ್ವನಿ ಪ್ರಭೇದಗಳು<br>ಘಟಕ - 4 ರಸಸಿದ್ಧಾಂತ, ರಸಪ್ರಭೇದಗಳು<br>ಘಟಕ - 5 ಔಚಿತ್ಯ ತತ್ವ |
| 8 | ಸಾಹಿತ್ಯ ವಿಮರ್ಶೆ | ಘಟಕ - 1 ಪಾಶ್ಚಿಮಾತ್ಯ ವಿಮರ್ಶಕರ ಪರಿಚಯ, ವಿಮರ್ಶೆಯ ಪರಿಚಯ<br>ಘಟಕ - 2 ವಿಮರ್ಶೆಯ ಸ್ವರೂಪ<br>ಘಟಕ - 3 ವಿಮರ್ಶೆಯ ವಿಧಾನಗಳು - 1<br>ಘಟಕ - 4 ವಿಮರ್ಶೆಯ ವಿಧಾನಗಳು - 2 |
| 9 | ಕನ್ನಡ ಭಾಷೆಯ ಚರಿತ್ರೆ | ಘಟಕ - 1 ಭಾಷೆ : ಸ್ವರೂಪ, ಲಕ್ಷಣ, ವರ್ಗೀಕರಣ, ದ್ರಾವಿಡ ಭಾಷೆಗಳು, ದ್ರಾವಿಡ ಭಾಷಾವರ್ಗೀಕರಣ<br>ಘಟಕ - 2 ಕನ್ನಡ ಕರ್ನಾಟಕ ಶಬ್ದ ನಿಷ್ಪತ್ತಿ, ಕನ್ನಡ ಸಂಸ್ಕೃತ - ಸಂಬಂಧ, ಪ್ರಾಂತ ಭೇದಗಳು ಇತ್ಯಾದಿ<br>ಘಟಕ - 3 ವರ್ಣಮಾಲೆ, ನಾಮಪದ, ಲಿಂಗ, ವಚನ, ವಿಭಕ್ತಿ, ಕ್ರಿಯಾಪದ, ಗುಣವಾಚಕ, ಅವ್ಯಯ<br>ಘಟಕ - 4 ಶಬ್ದಕೋಶ ಬೆಳವಣಿಗೆ, ದೇಶ್ಯ - ಅನ್ಯದೇಶ್ಯ ಪದಗಳು |
| 10 | ವ್ಯಾಕರಣ | ಘಟಕ - 1 ಶಬ್ದಮಣಿದರ್ಪಣ : ವ್ಯಾಕರಣ ಪರಿಚಯ, ವರ್ಣಮಾಲೆ<br>ಘಟಕ - 2 ಸಂಧಿಪ್ರಕರಣ, ನಾಮಪ್ರಕರಣ<br>ಘಟಕ - 3 ಸಮಾಸ ಪ್ರಕರಣ, ತದ್ಧಿತ ಪ್ರಕರಣ<br>ಘಟಕ - 4 ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಪ್ರಕರಣ |

## ಸಂಚಿಕೆ - 8

# ಸಾಹಿತ್ಯ ವಿಮರ್ಶೆಯ ಮೂಲತತ್ತ್ವಗಳು

## ಪಠ್ಯಕ್ರಮ ನಿರೂಪಕರು — ಸಂಚಿಕೆ - 8

ಶ್ರೀಮತಿ ಟಿ.ಎಂ. ಗೀತಾಂಜಲಿ — ಘಟಕ 1, 2, 3 ಮತ್ತು 4
ಅಧ್ಯಾಪಕಿ ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ,
ಮೈಸೂರು.

## ಪ್ರಕಾಶಕರು

ಶ್ರೀ ವಿ. ರಾಮಣ್ಣ
ಕುಲಸಚಿವರು (ಆಡಳಿತ)

ಕ.ರಾ.ಮು.ವಿ.,ಯ ಶೈಕ್ಷಣಿಕ ವಿಭಾಗದಿಂದ ಸಿದ್ಧಪಡಿಸಲಾಗಿದೆ.



ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ ಕೋರ್ಸ್‌ಗಳ ಹೆಚ್ಚಿನ ವಿವರಗಳನ್ನು
ವಿಶ್ವವಿದ್ಯಾನಿಲಯದ ಕಾರ್ಯಾಲಯ, ಮಾನಸಗಂಗೋತ್ರಿ, ಮೈಸೂರು - 570 006 ಇಲ್ಲಿಂದ ಪಡೆಯಬಹುದು.

ಪ್ರಿಯ ವಿದ್ಯಾರ್ಥಿ,

ಕನ್ನಡ ಎಂ.ಎ., ವ್ಯಾಸಂಗಕ್ಕಾಗಿ ನಮ್ಮ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ಪಡೆದಿರುವ ತಮ್ಮನ್ನು ನಮ್ಮ ಕನ್ನಡ ವಿಭಾಗದ ಅಧ್ಯಾಪಕ ವೃಂದ ಹೃತ್ಪೂರ್ವಕವಾಗಿ ಸ್ವಾಗತಿಸುತ್ತದೆ.

ತಮ್ಮ ಕೈಯಲ್ಲಿರುವ ಈ ಸಾಮಗ್ರಿಯು ನಮ್ಮಲ್ಲಿ 'ಮುಕ್ತ' ಪದ್ಧತಿಯಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳಿಗೆಂದೇ ವಿಶೇಷವಾಗಿ ಸಿದ್ಧಪಡಿಸಿದುದಾಗಿದೆ. ತಾವು ತಮ್ಮ ಸ್ವಂತ ಇಚ್ಛೆ ಮತ್ತು ಪರಿಶ್ರಮದಿಂದ ಕನ್ನಡ ಸಾಹಿತ್ಯವನ್ನು ವ್ಯಾಪಕವಾಗಿ ಓದಿಕೊಂಡಿದ್ದೀರಿ ಮತ್ತು ಅಭಿಮಾನವನ್ನೂ ಬೆಳೆಸಿಕೊಂಡಿದ್ದೀರಿ ಎಂದು ಭಾವಿಸಿದ್ದೇವೆ. ಇದನ್ನು ತುಂಬು ಮನಸ್ಸಿನಿಂದ ನಾವು ಗೌರವಿಸುತ್ತೇವೆ ಕೂಡ. ಈ ಬಗೆಯಲ್ಲಿ ತಾವು ಓದುವಿಕೆಯನ್ನು ಮಾಡಿದವರಾಗಿದ್ದರೂ ಅದು ಕೆಲವೊಮ್ಮೆ ಒಂದು ಶಿಸ್ತಿಗೆ ಒಳಪಟ್ಟ ಅಧ್ಯಯನವಾಗದೆಯೂ ಇರಬಹುದು. ಇಂತಹ ಸ್ಥಿತಿಯಿಂದ ನಿರ್ದಿಷ್ಟ ಶಿಸ್ತಿನ ಪದ್ಧತಿಗೆ ಪ್ರವೇಶ ಪಡೆದಾಗ ತಮಗೆ ಕೆಲಮಟ್ಟಿಗೆ ಶೈಕ್ಷಣಿಕ ತೊಡಕು (ಕೆಲವರಿಗಾದರೂ) ಎದುರಾಗಬಹುದು. ಈ ಕೊರತೆಯನ್ನು ನೀಗುವ ಸಲುವಾಗಿ *'ಸ್ನಾತಕೋತ್ತರ ಪದವಿ ಪೂರ್ವಸಿದ್ಧತಾ ಕಾರ್ಯಕ್ರಮ'* **[ *Master's Preparatory Programe (MPP)* ]** ವನ್ನು ಮುಕ್ತಪದ್ಧತಿಯ ವಿದ್ಯಾರ್ಥಿಗಳಿಗೆ ರೂಪಿಸಲಾಗಿದೆ. ಸಾಂಪ್ರದಾಯಿಕ ಶಿಕ್ಷಣ ಪದ್ಧತಿಯಲ್ಲಿ ಒಬ್ಬ ವಿದ್ಯಾರ್ಥಿ (ಬಿ.ಎ., ಪದವಿಯವರೆಗೆ) ವ್ಯಾಸಂಗ ಮಾಡಿರುವ ವಸ್ತು-ವಿಷಯಗಳ ಸ್ಥೂಲ ಮಾಹಿತಿಯನ್ನು ಈ (ಎಂಪಿಪಿ) ಸಾಮಗ್ರಿಯಲ್ಲಿ ಅಳವಡಿಸಲಾಗಿದೆ. ಮುಕ್ತ ಪದ್ಧತಿಯಲ್ಲಿ ಪ್ರವೇಶ ಪಡೆದ ತಮಗೆ ಈ ಸಾಮಗ್ರಿಯು ಕನ್ನಡ ಎಂ.ಎ. ವ್ಯಾಸಂಗಕ್ಕೆ ಸೂಕ್ತ ತಳಹದಿಯನ್ನು ನೀಡುವುದರೊಂದಿಗೆ ಆತ್ಮವಿಶ್ವಾಸವನ್ನು ಮೂಡಿಸುತ್ತದೆ.

ಕನ್ನಡ ಸಾಹಿತ್ಯ ಕುರಿತ 10 ಸಂಚಿಕೆಗಳಲ್ಲಿ ಇದು 8 ನೆಯದು. ಇದರಲ್ಲಿ ಸಾಹಿತ್ಯ ವಿಮರ್ಶೆಯ ಮೂಲತತ್ತ್ವಗಳಿಗೆ ಸಂಬಂಧಪಟ್ಟ ಪಾಶ್ಚಿಮಾತ್ಯ ವಿಮರ್ಶಕರ ಪರಿಚಯ, ವಿಮರ್ಶೆಯ ಪರಿಚಯ ವಿಮರ್ಶೆಯ ಸ್ವರೂಪ, ವಿಮರ್ಶೆಯ ವಿಧಾನಗಳೇ ಮೊದಲಾದ ಸಂಗತಿಗಳನ್ನು ಪ್ರಸ್ತಾಪಿಸಲಾಗಿದೆ.

ಈ ಸಾಮಗ್ರಿಯಲ್ಲಿನ ವಿಷಯಗಳನ್ನು ಸೂಕ್ಷ್ಮವಾಗಿ ತಾವು ಓದಬೇಕು, ಒಂದೊಂದು ಅಂಕಗಳಿಗೆ ಉತ್ತರಿಸಬಹುದಾದ 'ವಸ್ತುನಿಷ್ಠ' (Objective Type) ಪ್ರಶ್ನೆಗಳನ್ನು ತಾವೇ ಸಿದ್ಧಪಡಿಸಿಕೊಂಡು ಉತ್ತರಗಳನ್ನು ಕಂಡುಕೊಂಡು ಈ ಸಾಮಗ್ರಿ ಕುರಿತ ಪರೀಕ್ಷೆಗೆ ಸಿದ್ಧವಾಗಬೇಕು ಎಂದು ಸೂಚಿಸುತ್ತ; ಈ ಸಾಮಗ್ರಿಯ ಓದು ತಮಗೆ ಉದ್ದಿಷ್ಟಫಲವನ್ನು ನೀಡಲಿ ಎಂದು ಆಶಿಸುತ್ತೇವೆ.

ಅಧ್ಯಾಪಕ ವೃಂದದ ಪರವಾಗಿ
ತಮ್ಮ ವಿಶ್ವಾಸಿ
**ಡಾ. ಡಿ.ಟಿ. ಬಸವರಾಜ್**
ಅಧ್ಯಕ್ಷರು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

# ಸಂಚಿಕೆ - 8
# ಸಾಹಿತ್ಯ ವಿಮರ್ಶೆಯ ಮೂಲ ತತ್ವಗಳು

## ಘಟಕ -1
## ಪಾಶ್ಚಿಮಾತ್ಯ ವಿಮರ್ಶಕರ ಪರಿಚಯ ಮತ್ತು ವಿಮರ್ಶೆಯ ಪರಿಚಯ

ಪರಿವಿಡಿ :

## 1.1. ಘಟಕದ ಉದ್ದೇಶ

- ಪ್ರಸ್ತುತ ಘಟಕದಲ್ಲಿ ನೀವು ಸಾಹಿತ್ಯದ ಸ್ವರೂಪವನ್ನು ಮುಖ್ಯವಾಗಿ ಪಾಶ್ಚಾತ್ಯ ವಿಮರ್ಶಕರ ಅಭಿಪ್ರಾಯದ ಹಿನ್ನೆಲೆಯಲ್ಲಿ ತಿಳಿಯುವಿರಿ.
- ಸಾಹಿತ್ಯ ವಿಮರ್ಶೆ ಸ್ವರೂಪವನ್ನು ಕೂಡ ಇಲ್ಲಿ ವಿವಿಧ ಪಾಶ್ಚಾತ್ಯ ವಿಮರ್ಶಕರ ಅಭಿಪ್ರಾಯದ ಹಿನ್ನೆಲೆಯಲ್ಲಿ ತಿಳಿಯುವಿರಿ.
- ' ವಿಮರ್ಶೆ' ಯನ್ನು ಕುರಿತು ಸ್ಥೂಲ ನೋಟವನ್ನು ನೀವು ಇಲ್ಲಿ ಪಡೆಯಬಹುದಾಗಿದೆ.
- 'ಸಾಹಿತ್ಯ ವಿಮರ್ಶೆ' ಸಂಪೂರ್ಣವಾಗಿ ಪಾಶ್ಚಾತ್ಯ ಪ್ರಭಾವದಿಂದ ಬಂದ ಪ್ರಕಾರ ಎಂಬ ಅರಿವೂ ಇಲ್ಲಿ ನಿಮಗೆ ದೊರೆಯುವುದು.

## 1.2. ಪೀಠಿಕೆ

ಭಾರತೀಯ ಸಾಹಿತ್ಯ ತತ್ವಗಳು ಅಂದರೆ ಅದನ್ನು ನಮ್ಮ ಅಲಂಕಾರಿಗಳು ಕಾವ್ಯ ಮೀಮಾಂಸೆ ಎಂದು ಕರೆದಿದ್ದಾರೆ. ಇದು ಮುಖ್ಯವಾಗಿ ಸೈದ್ಧಾಂತಿಕ ಪರವಾದುದು. ರಸ, ಅಲಂಕಾರ, ಧ್ವನಿ, ಔಚಿತ್ಯವೆಂದು ಕಾವ್ಯಕ್ಕೆ ಮೂಲಭೂತವಾಗಿ ಸಂಬಂಧಿಸಿದ ಅಂಶಗಳನ್ನು ಹೆಚ್ಚು ಹೆಚ್ಚು ತಾತ್ವಿಕವಾಗಿ ಅವರು ಚರ್ಚಿಸಿದರು. ಈ ದಿಸೆಯಲ್ಲಿ ಭಾರತೀಯ ಕಾವ್ಯ ಮೀಮಾಂಸೆ ವಿಷಯವನ್ನು ಹೆಚ್ಚು ಹೆಚ್ಚು ಶಾಸ್ತ್ರೀಯವಾಗಿ ಮಂಡಿಸುವ ರೀತಿಯಲ್ಲಿ ಬೆಳೆದು ಬಂದಿತು.

ಆದರೆ ಪಾಶ್ಚಾತ್ಯ ಕಾವ್ಯ ಮೀಮಾಂಸೆ ಮುಖ್ಯವಾಗಿ ವಿಮರ್ಶಾ ಪರವಾದುದು. ಅರಿಸ್ಟಾಟಲಿನಿಂದ ಹಿಡಿದು ಇಂದಿನ ರಿಚರ್ಡ್ಸ್‌ನವರೆಗೂ ಅದು ಮುಖ್ಯವಾಗಿ ವಿಮರ್ಶಾತ್ಮಕವಾಗಿ ಸಾಹಿತ್ಯದ ತತ್ವಗಳನ್ನು ರೂಪಿಸುತ್ತಾ ಬಂದಿದೆ.

ಆಧುನಿಕ ಭಾರತೀಯ ಸಾಹಿತ್ಯ, ಆ ಸಾಹಿತ್ಯದಲ್ಲಿ ಬೆಳೆದು ಬಂದಿರುವ ಭಾವಗೀತೆ, ಸಣ್ಣ ಕಥೆಗಳು, ಕಾದಂಬರಿ ಮತ್ತು ನಾಟಕಗಳು ಮೊದಲಾದ ಸಾಹಿತ್ಯದ ವಿವಿಧ ಪ್ರಕಾರಗಳು ಅವಿರ್ಭವಿಸಿದ್ದು ಮುಖ್ಯವಾಗಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಎನ್ನಬಹುದು. ಅಥವಾ ಇಂದು ನಾವು ಕಾಣುತ್ತಿರುವ ಬಹುತೇಕ ಸಾಹಿತ್ಯ ಪ್ರಕಾರಗಳು ಪಾಶ್ಚಿಮಾತ್ಯ ಸಾಹಿತ್ಯಗಳ ಸಂಸರ್ಗ, ಸಂಘರ್ಷ, ಸಮ್ಮಥನಗಳಿಂದ ಅವಿರ್ಭವಿಸಿದವುಗಳಾಗಿವೆ.

ಪಾಶ್ಚಾತ್ಯ ವಿಮರ್ಶೆಯ ಪ್ರಭಾವ, ಪಾಶ್ಚಿಮಾತ್ಯ ಸಾಹಿತ್ಯ ಮೀಮಾಂಸೆಯ ತತ್ವಗಳೂ ಮತ್ತು ಪ್ರಕ್ರಿಯೆಗಳು ನಮ್ಮ ಸಾಹಿತ್ಯ ಪ್ರಕಾರಗಳಲ್ಲಿ ಹಾಸುಹೋಗಿ ಸೇರಿಕೊಂಡಿವೆ. ಈ ಎಲ್ಲ ಕಾರಣಗಳಿಂದ ಪಾಶ್ಚಿಮಾತ್ಯ ಸಾಹಿತ್ಯದ ತತ್ವಗಳ ಸಮರ್ಪಕ ಪರಿಚಯ, ಅರಿವು ನಮಗೆ ಲಬ್ಧವಾಗಬೇಕಾದ ಅವಶ್ಯಕತೆಯಿದೆ.

ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಉಕ್ತವಾಗಿರುವ ಧ್ವನಿ, ರಸ, ಔಚಿತ್ಯವೆಂಬ ತತ್ವಕ್ರಮ ಚಿರಂತನವಾದ ಮೌಲ್ಯಗಳುಳ್ಳದ್ದು. ಜಗತ್ತಿನ ಕಾವ್ಯ ಮೀಮಾಂಸೆಗೆ ಇವು ಭಾರತದ ಉಜ್ವಲವಾದ ಕೊಡುಗೆ. ಆದರೆ ನಮ್ಮ ಅಲಂಕಾರಿಕರು ಸಾಹಿತ್ಯದ ಒಂದು ಪ್ರಕಾರವನ್ನು ಎಂದರೆ ಕಾವ್ಯವನ್ನು (ಅದನ್ನೆ ದೃಶ್ಯ ಮತ್ತು ಶ್ರವ್ಯ ಎಂದು) ಕುರಿತು ಮಾತ್ರ ವಿಚಾರ ಮಾಡಿದರು. ಇವರು ಅನ್ವೇಶಿಸಿದ ತತ್ವಗಳ ಆಧಾರದಿಂದ ಇತ್ತೀಚಿನ ಸಾಹಿತ್ಯದ ಅರ್ವಾಚೀನ ಪ್ರಕಾರಗಳನ್ನೆಲ್ಲ ವಿವರಿಸುವುದು ಸಾಧ್ಯವಾಗಲಾರದು. ಏಕೆಂದರೆ ಈ ಒಂದೊಂದು ಬೇರೆ ಬೇರೆ ಪ್ರಕಾರಗಳಿಗೂ ಬೇರೆ ಬೇರೆ ನಿಯತಿ ನಿಯಮಗಳುಂಟು, ತತ್ವಗಳುಂಟು.

ಕೇವಲ ಕಾವ್ಯವೊಂದನ್ನೇಯಾದರೂ ಭಾರತೀಯ ಕಾವ್ಯಮೀಮಾಂಸೆಯ ವಲಯದಲ್ಲಿದ್ದುಕೊಂಡು ಪರಿಪೂರ್ಣವಾಗಿ ವಿವೇಚಿಸುವುದು ಶಕ್ಯವಾಗುವುದಿಲ್ಲ. ರಸ, ಧ್ವನಿ, ಔಚಿತ್ಯ ಮೊದಲಾದ ತತ್ವಗಳು ಎಷ್ಟೇ ಸಾರ್ವತ್ರಿಕ, ಶಾಶ್ವತ ಪರಿಕಲ್ಪನೆಗಳೇ ಆದರು ಅವುಗಳ ಆಧಾರದಿಂದ ಕಾವ್ಯವನ್ನು ವಿವೇಚಿಸುವುದು ಅಪರಿಪೂರ್ಣವಾಗುತ್ತದೆ. ಪಾಶ್ಚಿಮಾತ್ಯ ತತ್ವಗಳಾದ ಐಕ್ಯತ್ರಯ, ಪಾತ್ರಕಲ್ಪನೆ, ಸಂವಿಧಾನ, ದುರಂತ, ತತ್ವ, ಶೈಲಿಗಳೂ ಸಾಹಿತ್ಯ ಮೀಮಾಂಸೆಗೆ ಅತ್ಯವಶ್ಯಕವಾಗುತ್ತದೆ. ಪಾಶ್ಚಾತ್ಯ ಸಾಹಿತ್ಯ ಮೀಮಾಂಸೆಗೆ ಬೆನ್ನಲುಬಾಗಿರುವ ಸೌಂದರ್ಯ ಮೀಮಾಂಸೆ ಮನಶ್ಶಾಸ್ತ್ರಗಳ ಅರಿವೂ ಬೇಕಾಗುತ್ತದೆ.

ಒಟ್ಟಿನಲ್ಲಿ ಭಾರತೀಯ ಮತ್ತು ಪಾಶ್ಚಿಮಾತ್ಯ ಕಾವ್ಯ ಮೀಮಾಂಸೆಗಳ ಸಮನ್ವಯವನ್ನು ರೂಢಿಸುವುದು ನಮ್ಮ ಇಂದಿನ ಸಾಹಿತ್ಯದ ಅಧ್ಯಯನಕ್ಕೆ ಅತ್ಯವಶ್ಯಕವಾಗಿದೆ. ಇದರಿಂದ ಕಾವ್ಯ ಮೀಮಾಂಸೆ ಕೇವಲ ಅಲಂಕಾರಶಾಸ್ತ್ರದ ಮಟ್ಟದಲ್ಲಿಯೇ ನಿಲ್ಲದೆ ಸರ್ವತೋಮುಖವಾಗಿ, ಪರಿಪುಷ್ಟಿ ಹೊಂದಲು ಅನುಕೂಲವಾಗುತ್ತದೆ. ಪಾಶ್ಚಿಮಾತ್ಯ ಕಾವ್ಯ ಮೀಮಾಂಸೆಯ ಅಂದಾನುಕರಣವೂ ತಪ್ಪುತ್ತದೆ.

**ಪಾಶ್ಚಿಮಾತ್ಯ ವಿಮರ್ಶಕರ ಅಭಿಪ್ರಾಯದಲ್ಲಿ ಸಾಹಿತ್ಯದ ಸ್ವರೂಪ**

---

### 1.3.1. ಅರಿಸ್ಟಾಟಲ್ (ಕ್ರಿ.ಪೂ. 384 ರಿಂದ 322)

---

ಮೊದಲನೆಯದಾಗಿ ಪಾಶ್ಚಾತ್ಯ ಸಾಹಿತ್ಯದ ಆದ್ಯ ವಿಮರ್ಶಕ ಅರಿಸ್ಟಾಟಲ್ (ಕ್ರಿ.ಪೂ. 384 322). ಪಾಶ್ಚಿಮಾತ್ಯ ಸಂಸ್ಕೃತಿಯ ಇತಿಹಾಸವನ್ನು ಪರಿಶೀಲಿಸಿದರೆ ಪ್ರತಿಯುಗದಲ್ಲಿಯೂ ಅವಿಚ್ಛಿನ್ನವಾಗಿ ಪ್ರಭಾವ ಬೀರಿದವರು ಮುಖ್ಯವಾಗಿ 'ಹೋಮರ್' ಮತ್ತು ಅರಿಸ್ಟಾಟಲ್. ಹೋಮರ್ ಜನಪ್ರಿಯನಾಗುವುದರಲ್ಲಿ ಆಶ್ಚರ್ಯವಿಲ್ಲ. ಆದರೆ ತತ್ವಜ್ಞಾನಿಯೊಬ್ಬ ಜನಜೀವನದ ಮೇಲೆ ಇಷ್ಟು ಪ್ರಭಾವ ಬೀರುವುದು ಅಸಾಧಾರಣವಾದುದು. ನಮ್ಮ ಭರತ ಅಭಿನವಗುಪ್ತರಾರೂ ಹೀಗಿಲ್ಲ. ಸಾಹಿತ್ಯ ಸ್ವರೂಪದ ಬಗ್ಗೆ ಅವನ ವ್ಯಾಖ್ಯಾನ:

'ಮಹಾಕಾವ್ಯ (Epic Poerty) ಮತ್ತು ರುದ್ರನಾಟಕ ಹಾಗೆಯೇ ವೈನೋದಿಕ (Comedy) ಡಿಥಿರಾಂಬಿಕ್ ಕಾವ್ಯ, ವೇಣು ವೀಣಾ ವಾದನಗಳ ಬಹುಭಾಗ ಇವುಗಳೆಲ್ಲವೂ, ಒಟ್ಟಿನಲ್ಲಿ ನೋಡಿದರೆ

(ವಾಸ್ತವವಾಗಿ ನೋಡಿದರೆ ನಿರ್ಮಾಣಗಳಲ್ಲ) ಅನುಕರಣ (Imitation). "ಕವಿಯು ನೀಡಬೇಕಾದ ಆನಂದ ಅನುಕರಣದ ಮೂಲಕ ಕರುಣೆ ಮತ್ತು ಭಯಗಳಿಂದ ಜನಿಸುವ ಆನಂದ".

"ಸೌಂದರ್ಯ ಶಾಸ್ತ್ರಕ್ಕೆ ಅರಿಸ್ಟಾಟಲ್‌ನು ಇತ್ತಿರುವ ಕಾಣಿಕೆಗಳಲೆಲ್ಲಾ ಅತ್ಯಮೂಲ್ಯವಾದುದು ಅವನು ಕಾವ್ಯನುಕರಣವನ್ನು ವಿವರಿಸುವ ವಿಧಾನ" ಎಂದು ಅಬರ್ ಕ್ರಾಂಬಿ ಹೇಳಿರುವ ಮಾತನ್ನು ಬಹುತೇಕ ಎಲ್ಲ ವಿದ್ವಾಂಸರೂ ಒಪ್ಪುತ್ತಾರೆ.

ಇಲ್ಲಿ ಅರಿಸ್ಟಾಟಲ್‌ನ ಅಭಿಪ್ರಾಯದಲ್ಲಿ 'ಅನುಕರಣ' ವೆಂದರೆ ಜೀವನದ ಪ್ರತಿಬಿಂಬ ಎಂದು ಅರ್ಥವಲ್ಲ ಸಾಹಿತ್ಯವೆಂದರೆ ಜೀವನದ ಅನುಕರಣ ಎಂದು ಹೇಳುವುದಿಲ್ಲ. ಕವಿ ನಿರ್ಮಿಸುವುದು ಯಾವಾಗಲೂ ಒಂದು ಅನುಕೃತಿಯನ್ನೇ ಹೊರತು ನಿಜ ವಸ್ತುವನ್ನಲ್ಲ. (ಉದಾ: ಶಿವನನ್ನೊ, ವಿಷ್ಣುವನ್ನೊ ನಿರ್ಮಿಸುವ ಚಿತ್ರಕಾರರು, ವಾಸ್ತುಶಿಲ್ಪಿಗಳು ನಿಜವಾದ ಶಿವ, ವಿಷ್ಣುವನ್ನು ಚಿತ್ರಿಸುವುದಿಲ್ಲ. ಅವರು ಚಿತ್ರಿಸುವುದು ಅವರ ಅನುಕೃತಿಗಳನ್ನು.)

ಈ ದಿಸೆಯಲ್ಲಿ ಸಾಹಿತ್ಯವೂ ಇತಿಹಾಸದಂತೆ ವಸ್ತುಗಳ ಕ್ಷಣಿಕವಾದ ಸಿದ್ಧವಾದ, ವ್ಯವಹಾರಿಕ ರೂಪ ಮತ್ತು ವ್ಯಕ್ತಿ ರೂಪಗಳನ್ನು ಚಿತ್ರಿಸದೆ ಅವುಗಳ ಶಾಶ್ವತವಾದ ಸಾಧ್ಯವಾದ ಆದರ್ಶರೂಪಗಳನ್ನೂ ಅನುಕರಿಸುತ್ತದೆ. ಆದ್ದರಿಂದ ಜೀವನದ ಸತ್ಯಗಳನ್ನು ನಿರೂಪಿಸುವುದರಲ್ಲಿ ಕಾವ್ಯವೇ ಹೆಚ್ಚು ಸಮರ್ಥವಾದುದು ಎಂಬುದು ಅರಿಸ್ಟಾಟಲ್ ಸ್ಥಾಪಿಸಿದ್ದಾನೆ.

## 1.3.2. ಹೊರೇಸ್ ಕಾಲ (ಕ್ರಿ.ಪೂ. 1ನೇ ಶತಮಾನ)

ಅರಿಸ್ಟಾಟಲ್‌ನ ನಂತರದ ಮುಖ್ಯ ವಿಮರ್ಶಕ. ಅವನು 'ಕವಿ ತನ್ನಲ್ಲಿಯ ಕಲ್ಪಕತೆಗೆ ಚಾಲನೆಕೊಟ್ಟು ಪೂರ್ತಿಯಾಗಿ ಸತ್ಯವೂ ಅಲ್ಲದ, ಬರೀ ಕಲ್ಪಿತವೂ ಅಲ್ಲದ, ಆದರೆ ಎರಡರ ಬೆರಕೆಯಿಂದ ಸಿದ್ಧಿಯಿಂದ ಒಂದು ಪ್ರತಿ ನಿರ್ಮಿತಿಯನ್ನು ಮಾಡುತ್ತಾನೆ'. ಆನಂದಾನುಭವವನ್ನು ಒದಗಿಸಬಲ್ಲ ಕಲ್ಪಿಸಿದ ನಿರ್ಮಿತಿಯೇ ಕಾವ್ಯಕ್ರಿಯ ಪಲಶೃತಿನ್ನುತ್ತಾರೆ ಹೋರೇಸ್.

ಇಂಥ ನಿರ್ಮಾಣ ಕ್ರಿಯೆಯಲ್ಲಿ ಸ್ಪೂರ್ತಿಯ ಕಾರ್ಯವನ್ನು ಅವನು ಗುರುತಿಸುತ್ತಾನೆ. ಒಳ್ಳೆಯ ಕವಿ ಜನರ ಮನಸ್ಸನ್ನು ತಿದ್ದುವುದು ಮತ್ತು ಆನಂದಾನುಭವವನ್ನು ಒದಗಿಸುವುದು ಎರಡನ್ನೂ ಮಾಡುತ್ತಾನೆಂಬುದು ಅವರ ಅಭಿಪ್ರಾಯ.

## 1.3.3. ಡಾಂಟೆ (ಕ್ರಿ.ಶ. 13ನೇ ಶತಮಾನ)

"ಸಾಮಾನ್ಯ ಅನುಭವದ ಪ್ರಪಂಚದಿಂದ ಮನಸ್ಸನ್ನು ಮೇಲಕ್ಕೆತ್ತಿ ಅನನ್ಯ ಸಾಧಾರಣವಾದ ಆನಂದಾನುಭವಕ್ಕೆ ಕಾರಣವಾಗುವುದೇ ಸಾಹಿತ್ಯ" ಈ ದಿಸೆಯ ಸಾಹಿತ್ಯವಲ್ಲಿ ಭಾಷೆಯ ಬಳಕೆಗೆ ಸಂಬಂಧಿಸಿದಂತೆ ಡಾಂಟೆ ಹೆಚ್ಚಿನ ವಿಚಾರ ಮಾಡಿ ಸಾಹಿತ್ಯಕ್ಕೆ ಅತ್ಯುತ್ತಮ ಭಾಷೆಯೆಂದರೆ ದೇಶೀಯ

ಭಾಷೆ. ಅಂದರೆ ಕವಿಯ ಸ್ವಂತ ಭಾಷೆ. ವಿಚಿತ್ರವಾದ, ಅಲೌಕಿಕವಾದ ಆನಂದಾನುಭವವನ್ನು ಒದಗಿಸುವುದೇ ಸಾಹಿತ್ಯದ ವಿಶೇಷ ಮತ್ತು ಹಿರಿಮೆ ಎಂದು ಡಾಂಟೆ ಗುರುತಿಸುತ್ತಾನೆ.

## 1.3.4. ಸಿಡ್ನಿ : (1554-1586)

ಇಂಗ್ಲೇಂಡಿನಲ್ಲಿ ಕಾವ್ಯವಿಮರ್ಶೆ ನಿಶ್ಚಿತವಾಗಿ ಪ್ರಾರಂಭವಾಗುವುದು. ಸಿಡ್ನಿಯ "Define of Poeptry" ಯಿಂದ. ಸಿಡ್ನಿ ಕಾವ್ಯದ ಸ್ವರೂಪವನ್ನು ಕುರಿತು 'ಕವಿ ವಾಸ್ತವವಾಗಿ ನಿಸರ್ಗದಲ್ಲಿರುವುದಕ್ಕಿಂತ ಒಳ್ಳೆಯದಾದದ್ದನ್ನು ಅಲ್ಲಿ ಇರದೇ ಇದ್ದುದನ್ನು ನಿರ್ಮಿಸುತ್ತಾನೆ'. ಈ ದೃಷ್ಟಿಯಿಂದ ಅವನ ಪ್ರಕಾರ ನಿಜ ಸೃಷ್ಟಿ ಹಿತ್ತಾಳೆಯಂತಿದ್ದರೆ ಕವಿ ಅದನ್ನು ಚಿನ್ನವಾಗಿಸುತ್ತಾನೆ. ಈ ರೀತಿಯ ನಿರ್ಮಿತಿಯ ಸಾಮರ್ಥ್ಯ ಕವಿಯಲ್ಲಿ ಇರುವುದರಿಂದ 'ಇರಬಹುದಾದುದನ್ನು ಇರಬೇಕಿದ್ದನ್ನು' ಕವಿ ಚಿತ್ರಿಸುತ್ತಾನೆ. ಆದ್ದರಿಂದ 'ಸಾಹಿತ್ಯವೆಂಬುದು ಪ್ರಕೃತಿಯ ಆದರ್ಶ ಸ್ವರೂಪದ ಚಿತ್ರಣ' ವೆಂದು ಅವರ ಅಭಿಪ್ರಾಯ.

## 1.3.5. ಷೇಕ್ಸ್‌ಪಿಯರ್ : (1564 ರಿಂದ 1616)

ಮುಖ್ಯವಾಗಿ "A Mid Summer Night Dreams" ಮತ್ತು ಜೂಲಿಯಸ್ ಸೀಸರ್ ನಾಟಕಗಳು ಕವಿ ಮತ್ತು ಕಾವ್ಯವೃತ್ತಿಯನ್ನು ಕುರಿತು ಉಪಯುಕ್ತ ವಿಚಾರ ಪ್ರಚೋದಕ ಅಭಿಪ್ರಾಯಗಳನ್ನು ಕಲಾತ್ಮಕವಾಗಿ ವ್ಯಕ್ತಪಡಿಸಿದ್ದಾನೆ. 'ಅಜ್ಞಾತ ವಿಷಯಗಳ ರೂಪರೇಖೆ, ಕಲ್ಪನೆಯಲ್ಲಿ ಮೂರ್ತತ್ವ ಪಡೆದಂತೆಲ್ಲ, ಕವಿಯ ಲೇಖನಿ ಅವಕ್ಕೆ ಸ್ಪಷ್ಟ ಆಕೃತಿಯನ್ನು ನೀಡುತ್ತದೆ. .... ಆನಂದದಾಯಕ ಯಾವುದೋ ಅದನ್ನು ಗ್ರಹಿಸಿ ಸೃಷ್ಟಿಸುವ ಗುಣ ಶಕ್ತಿಯುತವಾದ ಕಲ್ಪನೆಗೆ ಇರುತ್ತದೆ. ಈ ದಿಸೆಯಲ್ಲಿ ಅವನು ಹುಚ್ಚ, ಪ್ರಣಯ ಕವಿ ಇವರಲ್ಲಿ ತುಂಬಿರುವುದು ಒಂದೇ ಕಲ್ಪನೆಯ ತಿರುಳು ಎನ್ನುತ್ತಾನೆ.

## 1.3.6. ವರ್ಡ್ಸ್‌ವರ್ಥ : "Preface of the Lirical Ballads" (1798)

ಇಂಗ್ಲಿಷ್ ನವೋದಯದ ಪ್ರಮುಖನಾದ ವರ್ಡ್ಸ್‌ವರ್ಥ ಇವರು "All Good Poetry is Sponchonies over flow of powerful tulings" (ಅಂದರೆ ಎಲ್ಲಾ ಒಳ್ಳೆಯ ಕವಿತೆಗಳೂ ಭಾವನೆಗಳ ಸ್ವಚ್ಛಂದ ಮಹಾ ಪೂರ) ಈ ದಿಸೆಯಲ್ಲಿ ಸೌಂದರ್ಯ ಮತ್ತು ಘನತೆಯ ಅರಿವಿರುವ ಕವಿ ತನ್ನ ಕೃತಿಯ ಮೂಲಕ ಈ ಸಾಮರ್ಥ್ಯ ಮಾಡುತ್ತಾನೆ. ಭಾವ ಸಾಮರ್ಥ್ಯವನ್ನು ವಿಸ್ತರಿಸಬೇಕು. ಕವಿಯಾದವನು ಎಲ್ಲ ಕಾಲದಲ್ಲಿಯೂ ಮಾಡಬಹುದಾದ ಶ್ರೇಷ್ಠ ಕೆಲಸ ಇದೇ ಎಂದು ಅಭಿಪ್ರಾಯ ಪಡುತ್ತಾನೆ.

## 1.3.7. ಶೆಲ್ಲಿ

"Poetry is the record of the best and happyist movements of the happyist and best minds" (ಕಾವ್ಯ ವೆಂಬುದು ಅತ್ಮಾನಂದದ ಮತ್ತು ಅತ್ಯುತ್ತಮ ಮನಸ್ಸುಗಳ ಆತ್ಮಾನಂದದ ಮತ್ತು ಅತ್ಯುತ್ತಮವಾದ ಕ್ಷಣಗಳ ದಾಖಲೆ) ಎನ್ನುತ್ತಾನೆ.

## 1.3.8. ಎಲಿಯಟ್

"ಜೀವನವನ್ನು ಹೆಚ್ಚು ಹೆಚ್ಚಾಗಿ ನೋಡಿ ಒಂದು ಜೀವನ ದೃಷ್ಟಿಯನ್ನು ರೂಪಿಸಿಕೊಂಡ ಮನಸ್ಸಿನ ಫಲವೇ ಸಾಹಿತ್ಯ ಕೃತಿಯಾಗಿರುತ್ತದೆ". ಜೀವನದ ವಾಸ್ತವ ಸತ್ಯದ ದೃಷ್ಟಿಯಿಂದ ಕೃತಿಯೊಳಗಿದ ಘಟನೆಗಳು ಸತ್ಯದೂರವಾಗಿರುತ್ತದೆ. ಸಾಹಿತ್ಯದಲ್ಲಿ ಕವಿಯ ಮೂಲಕ ನಾವು ಘಟನೆಗಳು ನೋಡುತ್ತೇವೆ. ಹಾಗೆ ನೋಡುವಾಗ ಅದನ್ನು ಇಡಿಯಾಗಿ ನೋಡಿ ಸಂಪೂರ್ಣವಾಗಿ ಅರಿಯುವುದು ಸಾಧ್ಯವಾಗುತ್ತದೆ."

## 1.3.9. ಐ.ಎ. ರಿಚರ್ಡ್ಸ್

19ನೇ ಶತಮಾನದ ಪ್ರಮುಖ ವಿಮರ್ಶಕ ಕಲೆಯ ಮೌಲ್ಯವೇನು? ಯಾಕೆ ಶ್ರೇಷ್ಠ ಮನಸ್ಸುಗಳು ಇದನ್ನು ಗಂಟೆಗಟ್ಟಲೆ ಅನುಸಂಧಾನ ಮಾಡಬೇಕು. ಅವುಗಳ ಪ್ರಾಮುಖ್ಯತೆ ಏನು? ಎಂದು ಚರ್ಚಿಸುತ್ತಾ ತನ್ನ ಹಿಂದಿನ ಪರಂಪರೆಯ ವಿಮರ್ಶಕರೆಲ್ಲಾ ಈ ಪ್ರಶ್ನೆಯನ್ನು ಮುಟ್ಟದೆ ಹಾಗೆ ಬಿಟ್ಟಿದ್ದಾರೆ ಎಂದು ಅರಿಸ್ಟಾಟಲ್‌ನಿಂದ ತನ್ನ ಹಿಂದಿನ ಮಹತ್ವದ ವಿಮರ್ಶಕರ ವಿಚಾರಗಳೆಲ್ಲವನ್ನೂ ಸಾಧಾರ ಪೂರ್ವಕವಾಗಿ ಅಲ್ಲಗೆಳೆಯುತ್ತಾನೆ.

ಒಳ್ಳೆಯ ಮೌಲ್ಯ ಯಾವುದು ಎಂದು ಪ್ರಶ್ನೆಸಿದರೆ ಅದು ವ್ಯಕ್ತಿಯಿಂದ ವ್ಯಕ್ತಿಗೆ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಹೋಗುತ್ತದೆ. ಹಾಗೆಯೇ ಪ್ರತಿಯೊಬ್ಬ ಮನುಷ್ಯನಿಗೂ ತನ್ನ ಹಿತವನ್ನು ಗಣಿಸುವುದೇ ಒಳ್ಳೆಯ ಮೌಲ್ಯ ಎನಿಸುತ್ತದೆ. ಆದರೆ ತನ್ನ ಇಷ್ಟದಿಂದ ಬೇರೆಯವರ ಇಷ್ಟಗಳಿಗೆ ಧಕ್ಕೆಯೊದಗಿದಾಗ ಅವ್ಯವಸ್ಥೆ ಉಂಟಾಗುತ್ತದೆ. ಆದ್ದರಿಂದ 'ತನ್ನಷ್ಟೇ ಮುಖ್ಯವಾದ ಇನ್ನೊಂದು ಪ್ರವೃತ್ತಿಯನ್ನು ಹತಾಷಗೊಳಿಸದೆ ಯಾವುದು ತನ್ನನ್ನು ತೃಪ್ತಿಪಡಿಸಿಕೊಳ್ಳುತ್ತಿದೆಯೇ' ಆ ಅನುಭವ, ಆ ಮೌಲ್ಯ ಮೌಲ್ಯಯುತವಾಯಿತು. ಆ ಅನುಭವವನ್ನು ಸಮಗ್ರವಾಗಿ ಸಾಹಿತ್ಯ ಮಾತ್ರ ನೀಡಬಲ್ಲದು. ಹಿಂದೆ ಧರ್ಮಕ್ಕೆ ಆಸ್ಥಾನವಿತ್ತು ಆದರೆ ಇಂದು ಧರ್ಮಕ್ಕೆ ಮನುಷ್ಯ ಆ ಸ್ಥಾನ ನೀಡದೆ ಇರುವುದರಿಂದ ಬದಲಾವಣೆಯ ಈ ಕಾಲದಲ್ಲಿ ಮನುಷ್ಯ ಅಡಗಲು ಒಂದು ಬಂಡೆ (Rock) ಬೇಕು. ಏಕೆಂದರೆ ಆಧುನಿಕ ಮನುಷ್ಯ ಏಕಾಂಗಿಯಾಗಿದ್ದಾನೆ, ಅವರ ಏಕಾಂಗಿತನ ದುಃಖಕರವಾದುದೆಂದು, ನೈತಿಕ ತತ್ವಗಳು ಬೆಲೆ ಕಳೆದುಕೊಂಡು ಅವನು ಸುಲಭವಾಗಿ ಅಮಾನುಷಿತೆಯೆಡೆ ಸಾಗಬಹುದು. ಈ ವಿನಾಶವನ್ನು ತಪ್ಪಿಸುವ ಸಾಮರ್ಥ್ಯ ಸಾಹಿತ್ಯಕ್ಕಿದೆ. ಆದ್ದರಿಂದ 'ಸಾಹಿತ್ಯದ ಮೂಲಕ ಮೌಲ್ಯಗಳ ವ್ಯವಸ್ಥೆಯನ್ನು ಪುನರ್ ರೂಪಿಸಿಕೊಳ್ಳಬಹುದು, ಗೊಂದಲದ ಸ್ಥಿತಿಯಿಂದ ವ್ಯವಸ್ಥೆಯ ಕಡೆ

ಹೋಗಬಹುದು' ಏಕೆಂದರೆ ಸಾಹಿತ್ಯ 'ಬೇರೆ ಬೇರೆ ಸಾರ್ಥಕ ಮನಸ್ಸುಗಳ ದಾಖಲೆಯಾಗಿರುತ್ತದೆ'. 'The arts are our store house of recorded values' (ಕಲೆಗಳು ನಮ್ಮ ಮೌಲ್ಯಗಳ ದಾಖಲೆಯ ಕಣಜವಾಗಿರುತ್ತದೆ.)

## 1.3.10. ಹಡ್ಸನ್

ಒಂದು ಮಹಾಕೃತಿ ನೇರವಾಗಿ ಬದುಕಿನಿಂದಲೇ ಹುಟ್ಟಿ ಬೆಳೆಯುತ್ತದೆ. ಅದನ್ನೋದುವುದರಿಂದ, ನಾವು ಬದುಕಿನ ವಿಶಾಲವೂ ನಿಕಟವೂ ನೂತನವೂ ಆದ ಸಂಬಂಧಗಳನ್ನು ಪಡೆಯುತ್ತೇವೆ, ಈ ಅಂಶದಲ್ಲಿಯೇ ಅದರ ಶಕ್ತಿಯ ಅಂತಿಮ ವಿವರಣೆಯಿದೆ.

ಮಾನವರು ಬದುಕಿನಲ್ಲಿ ಏನನ್ನು ಕಂಡಿದ್ದಾರೆ, ಅದರಿಂದ ಏನನ್ನು ಅನುಭವಿಸಿದ್ದಾ[illegible] ನಮ್ಮೆಲ್ಲರಿಗೂ ಅತ್ಯಂತ ಸಮೀಪವಾದ ಮತ್ತು ಶಾಶ್ವತವಾದ ಸ್ವಾರಸ್ಯವುಳ್ಳ ಅದರ ಮುಖಗಳ ಬಗ್ಗೆ ಏನನ್ನು ಆಲೋಚಿಸಿದ್ದಾರೆ ಮತ್ತು ಭಾವಿಸಿದ್ದಾರೆ ಎಂಬುದರ ಜೀವಂತ ದಾಖಲೆಯೇ ಸಾಹಿತ್ಯ, ಆದ್ದರಿಂದ ಅದು ಮೂಲಭೂತವಾಗಿ ಭಾಷಾ ಮಾಧ್ಯಮವಾಗಿ ಬಾಳಿನ ಅಭಿವ್ಯಕ್ತಿ.

## 1.4. ವಿಮರ್ಶೆ ಎಂದರೇನು ?

ವಿಮರ್ಶೆ ಮನುಷ್ಯನ ಹುಟ್ಟಿನೊಡನೆ ಒಡಮೂಡಿ ಬಂದಿರುತ್ತದೆ ಎನ್ನಬಹುದು. ಆದಿಮಾನವ ಸೃಷ್ಟಿಯ ಒಂದೊಂದು ವಿನ್ಯಾಸವನ್ನು ಕಂಡಾಗಲು ಉಂಟಾದ ಸಂಪರ್ಕ ಸಂಘರ್ಷಣೆಗಳಲ್ಲಿ ಅದಕ್ಕೆ ಪ್ರತಿಕ್ರಿಯೆ ತೋರುವಾಗ ಇದು ಏಕೆ ? ಇದು ಹೇಗೆ ? ಎಂದು ಮುಂತಾಗಿ ವಿವೇಚಿಸಿ ನೋಡುವುದೂ ಒಂದು ಸಹಜ ಪ್ರವೃತ್ತಿಯಾಗಿತ್ತು ಅಂದರೆ ಮನುಷ್ಯನ ಮನಸ್ಸು ಸದಾ ಎರಡು ದಿಕ್ಕಿನಲ್ಲಿ ಸ್ಫುರಿಸುತ್ತಿರುತ್ತದೆ. ಒಂದು-ಗ್ರಹಿಕೆ, ಸಂವೇದನೆ, ಸಂಸ್ಮರಣೆ, ಅಂತಸ್ಫುರಣೆ ಇನ್ನೊಂದು-ವಿಭಜನೆ, ವಿಶ್ಲೇಷಣೆ, ಪರಿಶೀಲನೆ, ಸಂಯೋಜನೆ.

ಹೀಗೆ ಮನಸ್ಸು , ಭಾವಪ್ರಧಾನ ಮತ್ತು ಬುದ್ಧಿ ಪ್ರಧಾನವೆಂದು ಎರಡು ಮುಖ್ಯ ದಿಕ್ಕಿನಲ್ಲಿ ಮನಸ್ಸು ಹರಿಯುತ್ತಿರುತ್ತದೆ. ಇದರಲ್ಲಿ ಭಾವಪ್ರಧಾನತೆ ಸೃಷ್ಟಿಶಕ್ತಿಗೆ ಕಾರಣವಾದರೆ ಬುದ್ಧಿಪ್ರಧಾನತೆ ವಿಮರ್ಶನ ಶಕ್ತಿಗೆ ಕಾರಣ.

ಸಾಹಿತ್ಯಕಲೆಯು ವಿವಿಧ ಪ್ರಕಾರಗಳಲ್ಲಿ ವ್ಯಕ್ತವಾದ ಜೀವನ ವಿವರ ಎಂಬುದಾಗಿ ಸೃಜನಾತ್ಮಕ ಸಾಹಿತ್ಯದ ಲಕ್ಷಣ ಹೇಳಬಹುದಾದರೆ ಆ ವಿವರಣೆಯನ್ನು ಅದಕ್ಕೆ ಮಾಧ್ಯಮವಾದ ಕಲಾ ವಿಚಾರವನ್ನು ಕುರಿತ ವಿವರಣೆ ಎಂದು ವಿಮರ್ಶಾತ್ಮಕ ಸಾಹಿತ್ಯದ ಲಕ್ಷಣ ಹೇಳಬಹುದು.

Litary Criticism ಗೆ ಸಂವಾದಿಯಾಗಿ ನಾವು 'ಸಾಹಿತ್ಯ ವಿಮರ್ಶೆ' ಎಂಬ ಪದವನ್ನು ಬಳಸುತ್ತಿದ್ದೇವೆ. ವಿಮರ್ಶೆ ಎನ್ನುವ ಪದ 'ಮೃಶ್' ಎಂದರೆ ತೀಡು, ಉಜ್ಜು, ಬಡಿ-ಎಂಬರ್ಥದ

ಧಾತುವಿಗೆ 'ವಿ' ಎಂಬ ಉಪಸರ್ಗ ಸೇರಿ ನಿಷ್ಪನ್ನವಾಗಿದೆ. ಅಂದರೆ ವಿಶೇಷವಾಗಿ ತೀಡಿನೋಡುವುದು, ಒರೆಗೆ ಹಚ್ಚುವುದು ಎಂಬ ಅರ್ಥವನ್ನು ಇದು ನೀಡುತ್ತದೆ.

ಸಾಹಿತ್ಯ ವಿಮರ್ಶೆ ಎಂದಾಗ ಪರಿಮಿತ ಅರ್ಥವ್ಯಾಪ್ತಿಗೆ ಈ ಮಾತು ಬಳಕೆಯಾಗುತ್ತದೆ. ಮೊದಲು ಸಾಹಿತ್ಯ ಸೃಷ್ಟಿ ಆನಂತರ ಸಾಹಿತ್ಯ ವಿಮರ್ಶೆ. ಸಾಹಿತ್ಯ ವಿಮರ್ಶೆ ಹುಟ್ಟಲು ಒಂದು ಬಲವಾದ ಸಾಹಿತ್ಯ ಪರಂಪರೆಯ ಹಿನ್ನೆಲೆ ಅತ್ಯವಶ್ಯಕವಾಗುದು.

## 1.5. ವಿಮರ್ಶಕನ ಮನೋಧರ್ಮ

ಮಿಡಲ್‌ಟನ್ ಮುರ್ರೆ ಎಂಬ ವಿಮರ್ಶಕ The function of criticism. therefore primarity the function of literature itself to providing a means of self expression for the critic" ಅಂದರೆ ಕವಿ ಕಲಾಕೃತಿಯಲ್ಲಿ ತನ್ನ ಅನುಭವವನ್ನು ವ್ಯಕ್ತ ಪಡಿಸಿಕೊಂಡರೆ, ವಿಮರ್ಶಕ ಆ ಕಲಾಕೃತಿಯನ್ನು ಆಶ್ರಯಿಸಿದ ತನ್ನ ವಿಮರ್ಶೆಯಲ್ಲಿ ತನ್ನನ್ನು ತಾನು ವ್ಯಕ್ತಪಡಿಸಿಕೊಳ್ಳುತ್ತಾನೆ.

ವಿಮರ್ಶಕ ಮೊದಲು ಸಹೃದಯನಾಗಬೇಕು. ಕಲಾಕೃತಿಯನ್ನು ತನ್ನ ನ್ಯಾಯದ ತಕ್ಕಡಿಯಲ್ಲಿಟ್ಟು ತೂಗುವ ಮುನ್ನ ಅದರ ಒಳಹೊಕ್ಕು ನೋಡು ನಮ್ರ ಪ್ರಯತ್ನ ಮೊದಲು ಅವಶ್ಯಕ.

'ಸಹೃದಯ' ಎಂಬ ಪದವೇ ಸೂಚಿಸುತ್ತಿರುವಂತೆ ಕವಿ ಹೃದಯಕ್ಕೆ ಸಮಾನವಾದ ಹೃದಯವುಳ್ಳವನು ಸಹೃದಯ. ಅಭಿನವಗುಪ್ತ ಸಹೃದಯನಿಗೆ ವರ್ಣನೀಯ ತನ್ಮಯೀಭವನ ಯೋಗ್ಯತೆ ಇರಬೇಕೆಂದು ಸೂಚಿಸುತ್ತಾನೆ. ಇದನ್ನೆ ಪರಾಕಾಯ ಪ್ರವೇಶದ ಸಾಮರ್ಥ್ಯ ವಿಮರ್ಶಕನಿಗೆ ಇರಬೇಕೆಂದು ಸೂಚಿಸುತ್ತಾನೆ. ಸಹೃದಯನೇ ಇನ್ನೊಂದು ಹೆಜ್ಜೆ ಮುಂದಿಟ್ಟಾಗ. ವಿಮರ್ಶಕನಾಗುತ್ತಾನೆ. ಈ ಹೀಗೆ ಕಲಾಕೃತಿಯಿಂದ ತಾನು ಅನುಭವಿಸಿದ ಆನಂದವನ್ನು ಇತರ ಸಾಮಾನ್ಯ ಓದುಗರಿಗೂ ತಿಳಿಸಿಕೊಡುವ ಪ್ರಯತ್ನ ಮಾಡಿದರೆ ಅವನು ವಿಮರ್ಶಕನಾಗುತ್ತಾನೆ.

ಸಹೃದಯ ಕಲಾನುಭವನದ ಆಸ್ವಾದನೆಯಿಂದ ತೃಪ್ತನಾದರೇ ವಿಮರ್ಶಕ ಆ ಅನುಭವಕ್ಕೆ ಕಾರಣವಾದ ಕೃತಿಯ ವಿಶ್ಲೇಷಣೆಗೆ ಮುಂದಾಗುತ್ತಾನೆ. ಅಂದರೆ ಅವನು ಎರಡು ದಿಕ್ಕಿನಲ್ಲಿ ವ್ಯವಹರಿಸುತ್ತಾನೆ. ಕೃತಿಯ ಮೂಲಕ ಏರಿ ಕಲಾವಿದನ ಅನುಭವವನ್ನು ಮುಟ್ಟುತ್ತಾನೆ. ಅಲ್ಲಿಂದಿಳಿದು ಬಂದು ಅದರ ವಿಶ್ಲೇಷಣೆ, ವಿವೇಚನೆಯನ್ನು ನಡೆಸುತ್ತಾನೆ. ತನ್ನ ಮುಂದಿರುವ ಕಲಾಕೃತಿಯಿಂದ ಪೂರ್ಣ ಅನುಭವವನ್ನು ಪಡೆಯುವುದು ಮತ್ತು ಇತರರು ಅದನ್ನು ಪಡೆಯಲು ನೆರವಾಗುವುದೇ ಉತ್ತಮ ವಿಮರ್ಶಕನ ಮನೋಧರ್ಮ.

ಆದ್ದರಿಂದ ಇದಕ್ಕೆ ಅಗತ್ಯವಾದ ಪೂರ್ವ ಸಿದ್ಧತೆಯನ್ನು ವಿಮರ್ಶಕ ಪಡೆದುಕೊಂಡಿರಬೇಕಾಗುತ್ತದೆ 1) . ಆಳವಾದ ಬಹುಮುಖವಾದ ವ್ಯಾಸಂಗ, 2) . ಲೋಕಾನುಭವ, ಜೊತೆಗೆ ತಾನು ವಿಮರ್ಶಿಸಲಿರುವ 3) ಕಲೆಯ ಪಾರಿಭಾಷಕ ವಿವರಗಳ ಪರಿಣತಿ ಆತನಿಗೆ ಅಗತ್ಯ.

ಆದರೆ ಕೃತಿಕಾರನನ್ನು ಹಿಂದಕ್ಕೆ ತಳ್ಳಿ ವಿಮರ್ಶಕ ತನ್ನತನವನ್ನು ಮುಂದು ಮಾಡಬಾರದು. ಆಗ ವಿಮರ್ಶೆ ವಿಫಲವಾಗುತ್ತದೆ. ವಿಮರ್ಶಕನಿಗೆ ತನ್ನೆದುರಿನ ಕಾವ್ಯ (ಕೃತಿ) ಮುಖ್ಯವೇ ಹೊರತು ಕವಿಯಲ್ಲ. ಅಂದರೆ ವಿಮರ್ಶಕನು ತನ್ನ ವೈಯಕ್ತಿಕ ರಾಗ ಭಾವಕ್ಕಾಗಲಿ, ಸ್ನೇಹ ದ್ವೇಷಕ್ಕಾಗಲೀ, ಅಭಿವ್ಯಕ್ತಿಸಲು ಅವನ ಕಾರ್ಯದಲ್ಲಿ ಆಸ್ಪದವಿಲ್ಲ. ಇದನ್ನೆ Eliot "Honest Criticism and Sensitive Appreciation is directed not upon the poet but upon the poetry" ಆದ್ದರಿಂದ Inflxible Honesty ವಿಮರ್ಶಕನಿಗೆ ಇರಬೇಕು ಎಂದು ಮಾಥ್ಯೂ ಆರ್ನಾಲ್ಡ್ ಹೇಳುತ್ತಾನೆ. ಅಂದರೆ ವಿಮರ್ಶಕ ಕೃತಿಯ ಮತ್ತು ಕಲಾವಿದನ ವಿಚಾರದಲ್ಲಿ ಯಾವುದೇ ಪೂರ್ವಾಗ್ರಹ ಪೀಡನೆಗೆ ಒಳಗಾಗದೆ, ತಾನು ವಿಮರ್ಶನ ಮಾಡುತ್ತಿರುವ ಕೃತಿಗೆ ಅಚಲವಾದ ಪ್ರಾಮಾಣಿಕತೆ ತೋರಬೇಕು.

## 1.6. ವಿಮರ್ಶಕನ ಕಾರ್ಯ ವಿಧಾನ

"The two pillers upon which theory of critisism must rest are an account of value and an account of communication" ವಿಮರ್ಶನ ಸಿದ್ಧಾಂತದ ಎರಡು ಆಧಾರ ಸ್ತಂಬಗಳು ಯಾವುವು ಎಂದರೆ 'ಮೌಲ್ಯ ವಿವೇಚನೆ' ಮತ್ತು 'ಅನುಭವಗಳ ಸಂವಹನ' ಎನ್ನುತ್ತಾನೆ I.A. ರಿಚರ್ಡ್

ಅಂದರೆ ಸಾಹಿತ್ಯವಿಮರ್ಶಕ ತಾನು ಅರ್ಥೈಸುತ್ತಿರುವ ಕೃತಿಯನ್ನು ಓದುಗರಿಗೆ ಸಂವಹನಗೊಳಿಸಲು ಪ್ರಯತ್ನಿಸುತ್ತಾನೆ. ಹೀಗೆ ಕೃತಿಯನ್ನು ಅರ್ಥೈಸುವುದರ ಜೊತೆಗೆ ಅದರ ಸ್ಥಾನವೇನು? ಅದರ ಯೋಗ್ಯತೆಯೇನು? ಇಡೀ ಪರಂಪರೆಯಲ್ಲಿ ಅದು ಎಲ್ಲಿ ನಿಲ್ಲುತ್ತದೆ ಎಂದು ಅದರ ಮೌಲ್ಯವನ್ನು ನಿರ್ದರಿಸುತ್ತಾನೆ.

ವಿಮರ್ಶೆಯ ಕಾರ್ಯ ಮುಖ್ಯವಾಗಿ ಎರಡು ಬಗೆ

1. ಕೃತಿಯ ವ್ಯಾಖ್ಯಾನ, ವಿಭಜನೆ, ವಿಶ್ಲೇಷಣೆ
2. ಕೃತಿಯ ಮೌಲ್ಯಮಾಪನ ಮತ್ತು ಸ್ಥಾನ ನಿರ್ದೇಶನ

ಮಾಥ್ಯೂ ಆರ್ನಾಲ್ಡ್ ಮಹೋನ್ನತ ಕೃತಿಗಳ ನಿರ್ಮಾಣಕ್ಕೆ ಎರಡು ಶಕ್ತಿಗಳ ಸಂಗಮವಾಗಬೇಕೆಂದು ಹೇಳುತ್ತಾನೆ. "The power of the Man" ಮತ್ತು " The power of the moment." ಇಲ್ಲಿ Power of the moment ನ್ನು ಸಿದ್ಧಗೊಳಿಸುವವರು ವಿಮರ್ಶಕರು.

## 1.7. ಸಾರಾಂಶ

ಪಾಶ್ಚಾತ್ಯ ಸಾಹಿತ್ಯ ವಿಮರ್ಶೆಗೆ ಸುಮಾರು ಎರಡು ಸಾವಿರ ವರ್ಷಗಳ ಸುದೀರ್ಘ ಇತಿಹಾಸವಿದೆ. ಅರಿಸ್ಟಾಟಲ್‌ನಿಂದ ಹಿಡಿದು ಇತ್ತೀಚಿನ ರಿಚರ್ಡ್ಸ್‌ವರೆಗೆ ಪಾಶ್ಚಿಮಾತ್ಯರಲ್ಲಿ ರೂಪುಗೊಂಡ ಸಾಹಿತ್ಯ ಸಿದ್ಧಾಂತಗಳು ಮತ್ತು ತತ್ವಗಳು ಮುಖ್ಯವಾಗಿ ವಿಮರ್ಶಾಪರವಾದುದು.

ಮತ್ತು ಪಾಶ್ಚಿಮಾತ್ಯರಲ್ಲಿ ವಿಮರ್ಶನ ತತ್ವಗಳೂ ಕೂಡ ಮುಖ್ಯವಾಗಿ ಒಬ್ಬರ ಪ್ರಶ್ನೆಗೆ ಮತ್ತೊಬ್ಬರು ಉತ್ತರ ನೀಡುವಂತೆ ಬೆಳೆದು ಬಂದ ತಳಹದಿಯಿದೆ. ಪ್ರಸ್ತುತ ಘಟಕದಲ್ಲಿ ವಿದ್ಯಾರ್ಥಿಗಳು ಈ ಇತಿಹಾಸವನ್ನು ಸುದೀರ್ಘವಾಗಿ ಅಧ್ಯಯನ ನಡೆಸುವುದು ಸಾಧ್ಯವಿಲ್ಲ. ಅದರ ಕೆಲವು ತುಣುಕುಗಳ ಪರಿತಯವನ್ನಷ್ಟೇ ಇಲ್ಲಿ ನೀವು ಪಡೆದಿರುವಿರಿ ಎಂಬ ಮಿತಿಯ ಅರಿವು ಇಲ್ಲಿ ವಿದ್ಯಾರ್ಥಿಗಳಿಗೆ ಇರಬೇಕು.

## 1.8. ಪಾರಾಮರ್ಶನ ಗ್ರಂಥಗಳು

1. "ಹಡ್ಸನ್‌ನ ಸಾಹಿತ್ಯ ಪ್ರವೇಶ" ಮೂಲ; ಹೆನ್ರಿ ಹಡ್ಸನ್
ಅನು; ಸಿ.ಪಿ.ಕೆ.
2. ಸಾಹಿತ್ಯ ವಿಮರ್ಶೆಯ ಮೂಲತತ್ವಗಳು; ಡಾ.ಎಸ್. ತಿಪ್ಪೇರುದ್ರಸ್ವಾಮಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

## 1.9. ಸ್ವಯಂ ಅಭ್ಯಾಸ

1. ವಿವಿಧ ಪಾಶ್ಚಿಮಾತ್ಯ ವಿಮರ್ಶಕರ ಅಭಿಪ್ರಾಯದ ಹಿನ್ನೆಲೆಯಲ್ಲಿ ಸಾಹಿತ್ಯ ಎಂದರೇನು ಎಂದು ವಿವರಿಸಿ.

..........................................................................................

..........................................................................................

..........................................................................................

..........................................................................................

2. ವಿಮರ್ಶೆಯ ಕಾರ್ಯವಿಧಾನಗಳನ್ನು ಪರಿಚಯಿಸಿಕೊಡಿ

..........................................................................................

..........................................................................................

..........................................................................................

..........................................................................................

3. ಉತ್ತಮ ವಿಮರ್ಶಕನ ಮನೋಧರ್ಮ ಹೇಗಿರಬೇಕೆಂದು ವಿವರಿಸಿ.

..........................................................................................

..........................................................................................

..........................................................................................

4. ವಿಮರ್ಶೆ ಎಂದರೇನು? ವಿಮರ್ಶಕನ ಮನೋಧರ್ಮ ಕುರಿತು ಬರೆಯಿರಿ.

..........................................................................................

..........................................................................................

ಸಂಚಿಕೆ - 8

## ಸಾಹಿತ್ಯ ವಿಮರ್ಶೆಯ ಮೂಲ ತತ್ವಗಳು

ಘಟಕ -2

## ವಿಮರ್ಶೆಯ ಸ್ವರೂಪ

**ಪರಿವಿಡಿ :**

2.1. ಘಟಕದ ಉದ್ದೇಶ

2.2. ಪೀಠಿಕೆ

2.3. ವಿಮರ್ಶೆಯ ಸ್ವರೂಪ ಮತ್ತು ಸತ್ವ

2.4. ವಿಮರ್ಶೆಯ ವಿವಿಧ ಮಾರ್ಗಗಳು

2.5. ಸಾರಾಂಶ

2.6. ಸ್ವಯಂ ಅಭ್ಯಾಸ

## 2.1. ಘಟಕದ ಉದ್ದೇಶ

- ಪ್ರಸ್ತುತ ಘಟಕದಲ್ಲಿ ವಿದ್ಯಾರ್ಥಿಗಳು ತಿಪ್ಪೇರುದ್ರಸ್ವಾಮಿಯವರು 'ಸಾಹಿತ್ಯ ವಿಮರ್ಶೆಯ ಮೂಲ ತತ್ವಗಳು' ಕೃತಿಯಲ್ಲಿ ನೀಡಿರುವ ವಿಮರ್ಶೆಯ ಸ್ವರೂಪವನ್ನು ತಿಳಿಯುವಿರಿ.

- ವಿಮರ್ಶೆಯು ನಮ್ಮ ಭಾರತೀಯರಲ್ಲಿ ಬೆಳೆದು ಬಂದ ಬಗೆ ಮತ್ತು ಪಾಶ್ಚಿಮಾತ್ಯರಲ್ಲಿ ಬೆಳೆದು ಬಂದ ಬಗೆ ಎರಡೂ ದಿಕ್ಕಿನಿಂದ ಅವರು ಇಲ್ಲಿ ವಿವೇಚನೆ ನಡೆಸಿದ್ದಾರೆ.

- ವಿಮರ್ಶೆ ನಮ್ಮ ಭಾರತೀಯರಲ್ಲಿ ಪಡೆದ ತಿರುವುಗಳು, ಪಾಶ್ಚಿಮಾತ್ಯರಲ್ಲಿ ಪಡೆದ ತಿರುವುಗಳ ಅರಿವೂ ಇಲ್ಲಿ ನಿಮಗೆ ಲಭಿಸುತ್ತದೆ.

- ವಿಮರ್ಶೆಯಲ್ಲಿ ವಿವಿಧ ಮಾರ್ಗಗಳು ರೂಪುಗೊಳ್ಳಲು ಕಾರಣವೇನು ಎಂಬುದನ್ನೂ ಇಲ್ಲಿ ನೀವು ತಿಳಿಯುವಿರಿ.

## 2.2. ಪೀಠಿಕೆ

ಇಲ್ಲಿಂದ ಮುಂದಿನ ಮೂರು ಘಟಕಗಳು ತಿಪ್ಪೇರುದ್ರಸ್ವಾಮಿಯವರ 'ಸಾಹಿತ್ಯ ವಿಮರ್ಶೆಯ ಮೂಲತತ್ವಗಳು' ಗ್ರಂಥದಲ್ಲಿನ ವಿಷಯವನ್ನು ಯಥಾವತ್ತಾಗಿ ನೀಡಲಾಗಿದೆ. ವಿಮರ್ಶೆಯ ಸ್ವರೂಪ ಮತ್ತು ವಿವಿಧ ಮಾರ್ಗಗಳನ್ನು ಅವರು ಭಾರತೀಯ ಮತ್ತು ಪಾಶ್ಚಾತ್ಯ ವಿಮರ್ಶಕರ ಅಭಿಪ್ರಾಯದ ಹಿನ್ನೆಲೆಯಲ್ಲಿ ನಿರೂಪಿಸುವುದರಿಂದ ವಿಮರ್ಶೆಯನ್ನು ಕುರಿತು ಸ್ಥೂಲ ನೋ ಟ ಇದರಿಂದ ದೊರೆಯುವುದು ಸಾಧ್ಯವಾಗುತ್ತದೆ.

## 2.3. ವಿಮರ್ಶೆಯ ಸ್ವರೂಪ ಮತ್ತು ಸತ್ವ

### ವಿಮರ್ಶೆಯ ಬೆಳವಣಿಗೆ

ಒಂದರ್ಥದಲ್ಲಿ ಸಾಹಿತ್ಯ ಕೃತಿಗಳಷ್ಟೇ, ಸಾಹಿತ್ಯ ವಿಮರ್ಶೆಯೂ ಪ್ರಾಚೀನ, ಕವಿಯೇ ತನ್ನ ಕಾವ್ಯದ ಮೊದಲ ವಿಮರ್ಶಕ. ರಚನಾ ಮುಹೂರ್ತದಲ್ಲಿ ಆತನ ವಿಮರ್ಶಶಕ್ತಿ ಕೆಲಸ ಮಾಡುತ್ತದೆ, ಕೃತಿ ರಚನೆ ಪೂರ್ಣವಾದ ಮೇಲೆ ತನ್ನ ಕಾವ್ಯಕ್ಕೆ ತಾನೇ ಸಹೃದಯನಾಗುತ್ತಾನೆ, ವಿಮರ್ಶಕನಾಗುತ್ತಾನೆ. ಅನಂತರ ಅದನ್ನು ಜಗತ್ತಿನ ಮುಂದಿಡುತ್ತಾನೆ. ಸಹೃದಯರು ಅದರಿಂದ ಅನುಭವವನ್ನು ಪಡೆಯುತ್ತಾರೆ, ಅದನ್ನು ವಿಶ್ಲೇಷಿಸುತ್ತಾರೆ, ಅದರ ಬೆಲೆ ಕಟ್ಟಲು ಹವಣಿಸುತ್ತಾರೆ. ಈ ಅರ್ಥದಲ್ಲಿ ಕೃತಿಗಳು ಮೊದಲು, ಅನಂತರ ಸಾಹಿತ್ಯವಿಮರ್ಶೆ; ಮಾನವ ಮೊದಲು, ಅನಂತರ ಮಾನವ ಶಾಸ್ತ್ರ; ಸಮಾಜ ಮೊದಲು, ಅನಂತರ ಸಮಾಜಶಾಸ್ತ್ರ ಇದ್ದಂತೆ.

ಸಾಹಿತ್ಯ ಕೃತಿಗಳಿಂದ ಪಡೆದ ಅನುಭವವನ್ನು ಕುರಿತು ಮೊಟ್ಟ ಮೊದಲ ಪ್ರತಿ ಕ್ರಿಯೆಯನ್ನು ವ್ಯಕ್ತಪಡಿಸಿದಾಗ ವಿಮರ್ಶೆ ಹುಟ್ಟಿತು. ಜಗತ್ತಿನ ಸೌಂದರ್ಯಕ್ಕೆ ಕವಿ ವ್ಯಕ್ತಪಡಿಸುವ ಪ್ರತಿಕ್ರಿಯೆ ಕಾವ್ಯವಾದರೆ, ಕಾವ್ಯವನ್ನು ಕುರಿತು ಸಹೃದಯ ವ್ಯಕ್ತಪಡಿಸುವ ಪ್ರತಿಕ್ರಿಯೆ ವಿಮರ್ಶೆ:

"ಕೂಜಂತಂ ರಾಮರಾಮೇತಿ ಮಧುರಂ ಮಧುರಾಕ್ಷರಂ
ಆರುಹ್ಯ ಕವಿತಾ ಶಾಖಾಂ ವಂದೇ ವಾಲ್ಮೀಕಿ ಕೋಕಿಲಂ"

ಎಂಬ ಉದ್ಗಾರ ರಾಮಾಯಣವನ್ನು ಕುರಿತ ಮೊದಲ ವಿಮರ್ಶೆ. ಪ್ರಾರಂಭದ ಇಂತಹ ಉದ್ಗಾರಗಳೇ ಮುಂದೆ ವ್ಯವಸ್ಥಿತ ರೂಪವನ್ನು ಪಡೆದು ಕಾವ್ಯ ಮೀಮಾಂಸೆಗೂ ವಿಮರ್ಶೆಗೂ ನಾಂದಿಯಾದುವೆಂದು ಹೇಳಬಹುದು.

ಭಾರತೀಯ ಕಾವ್ಯಮೀಮಾಂಸೆಯ ಮೂಲಪುರುಷ ಭರತ, ಪಾಶ್ಚಾತ್ಯ ಕಾವ್ಯ ಮೀಮಾಂಸೆ, ಅರಿಸ್ಟಾಟಲ್ ಇದ್ದಂತೆ. ಭರತನಿಗಿಂದ ಹಿಂದೆ ಶಿಲಾಲಿ ಕೃಶಾಶ್ವ ಮೊದಲಾದ ಮೀಮಾಂಸಕರಿದ್ದ ಸೂಚನೆ ಕಂಡುಬಂದರೂ ಅವರ ಕೃತಿಗಳು ಸಿಕ್ಕದೇ ಇರುವುದರಿಂದ, ಈಗಿನಮಟ್ಟಿಗೆ ಆತನ ನಾಟ್ಯಶಾಸ್ತ್ರವೇ ಅತ್ಯಂತ ಪ್ರಾಚೀನ. ಅಲ್ಲಿ ನಡೆದಿರುವ ವಿಚಾರಮಂಡನೆಯನ್ನೂ ಪ್ರತಿಪಾದನೆಯ ಪ್ರೌಢಿಮೆಯನ್ನೂ ನೋಡಿದರೆ ಆತನಿಗಿಂತ ಹಿಂದೆಯೇ ಈ ರಂಗದಲ್ಲಿ ಸಾಕಷ್ಟು ಕೆಲಸ ನಡೆದಿದ್ದಿತೆಂಬುದು ನಿಸ್ಸಂದೇಹ. ಈ ಮಾತು ಅರಿಸ್ಟಾಟಲನಿಗೂ ಅನ್ವಯಿಸುತ್ತದೆ. ಹೋಮರನಲ್ಲಿಯೇ ವಿಮರ್ಶೆಯ ಸುಳುಹುಗಳು ಕಾಣುತ್ತವೆ. ಅನಂತರ ಹೇಸಿಯಡ್, ಸಲೋನ್, ಪಿಂಡಾರ ಮೊದಲಾದ ಅನೇಕ ವಿದ್ವಾಂಸರು ವಿಮರ್ಶೆಯ ಅಭಿಪ್ರಾಯಗಳನ್ನು ವ್ಯಕ್ತ ಪಡಿಸಿದ್ದಾರೆ. ಅನಂತರ ಬಂದ ಪ್ಲೇಟೋ ಈ ಸಂದರ್ಭದಲ್ಲಿ ಗಮನಿಸಬೇಕಾದ ಬಹುಮುಖ್ಯವಾದ ಹೆಸರು. ಕಾವ್ಯವನ್ನು ಖಂಡಿಸುವುದಕ್ಕಾಗಿ ಈತ ಬಳಸಿಕೊಂಡ ಅಂಶಗಳನ್ನೇ ಈತನ ಶಿಷ್ಯ ಅರಿಸ್ಟಾಟಲ್ ಕಾವ್ಯದ ಮಂಡನೆಗೆ ಸಮರ್ಥನೆಗೆ ಅಳವಡಿಸಿಕೊಂಡ ಬಗೆ ಕುತೂಹಲಕರವಾದದ್ದು. ಆತನ 'ಕಾವ್ಯಮೀಮಾಂಸೆ' ಯಲ್ಲಿ ಅದು ವ್ಯಕ್ತವಾಗಿದೆ. ತನ್ನ ಹಿಂದಿನ ಅಭಿಪ್ರಾಯಗಳನ್ನೆಲ್ಲಾ ಅರಗಿಸಿಕೊಂಡು, ನಮ್ಮಲ್ಲಿ ಭರತನ ನಾಟ್ಯಶಾಸ್ತ್ರ ಮಾಡಿದ ಕೆಲಸವನ್ನೇ ಅಲ್ಲಿ ಅರಿಸ್ಟಾಟಲನ 'ಕಾವ್ಯ ಮೀಮಾಂಸೆ' -(Poetics) ಮಾಡಿದೆ. ಪ್ರಧಾನವಾಗಿ ರುದ್ರನಾಟಕದ ವಿವೇಚನೆಯ ಮೂಲಕ ಕಾವ್ಯಸಿದ್ಧಾಂತವನ್ನು ಅದು ಸ್ಥಾಪಿಸಿತು.

ಭರತನಿಂದ ಪ್ರಾರಂಭವಾದ 'ಭಾರತೀಯ ಕಾವ್ಯ ಮೀಮಾಂಸೆ' ತನ್ನ ದೀರ್ಘ ಇತಿಹಾಸದಲ್ಲಿ ಅತ್ಯಂತ ಶ್ರೀಮಂತವಾದ ಪರಂಪರೆಯನ್ನು ಬೆಳೆಸಿಕೊಂಡು ಬಂದಿತು. ಕಾವ್ಯದ ರೂಪ ಮತ್ತು ಸ್ವರೂಪದ ಸೂಕ್ಷ್ಮಾತಿಸೂಕ್ಷ್ಮವಾದ ವಿಚಾರಗಳನ್ನು ಹಿಡಿದು ಆಶ್ಚರ್ಯಕರವಾಗುವಷ್ಟರಮಟ್ಟಿಗೆ ಚರ್ಚಿಸಿತು; ಕೆಲವು ಸಿದ್ಧಾಂತಗಳನ್ನು ಮಂಡಿಸಿತು. ಭಾಮಹನ ಅಲಂಕಾರ ಸಿದ್ಧಾಂತ, ದಂಡಿ ವಾಮನರ ಗುಣ-ರೀತಿ ಸಿದ್ಧಾಂತಗಳು, ಆನಂದವರ್ಧನನ ಧ್ವನಿಸಿದ್ಧಾಂತ, ಅಭಿನವಗುಪ್ತನ ಧ್ವನಿ-ರಸ ವ್ಯಾಖ್ಯಾನಗಳು, ಕುಂತಕನ ವಕ್ರೋಕ್ತಿ - ಈ ಒಂದೊಂದೂ ಪ್ರಧಾನವಾದ ಘಟ್ಟಗಳು. ಇವುಗಳಲ್ಲಿ ಒಂದಲ್ಲ ಒಂದನ್ನು ಎತ್ತಿಹಿಡಿದ, ಇಲ್ಲವೇ ಸಮಗ್ರವಾಗಿ ಸಂಗ್ರಹಿಸಿಕೊಟ್ಟ ಅಲಂಕಾರಿಕರ ಸಂಖ್ಯೆ ಬಹು ದೊಡ್ಡದು. ರುದ್ರಟ, ಉದ್ಭಟ, ಮಮ್ಮಟ, ಕ್ಷೇಮೇಂದ್ರ, ಭೋಜ, ರಾಜಶೇಖರ, ವಿಶ್ವನಾಥ, ವಿದ್ಯಾನಾಥ, ಜಗನ್ನಾಥ, ಅಪ್ಪಯ್ಯದೀಕ್ಷಿತ- ಈ ಮೊದಲಾದ ಕೆಲವರನ್ನು ಮಾತ್ರ ಹೆಸರಿಸಬಹುದು.

ಇಲ್ಲಿ ಮುಖ್ಯವಾಗಿ ಕಾಣುವುದು ವಿಮರ್ಶೆಗಿಂತ ಹೆಚ್ಚಾಗಿ ಮೀಮಾಂಸೆ; ಅಂದರೆ ಕಾವ್ಯದ ಸ್ವರೂಪವೇನು? ಕಾವ್ಯದ ಆತ್ಮ ಯಾವುದು? ರೀತಿಯೇ? ಅಲಂಕಾರಗಳೇ? ಧ್ವನಿಯೇ? ರಸವೇ?- ಇತ್ಯಾದಿ ಮೂಲಭೂತವಾದ ತತ್ವಗಳ ಜಿಜ್ಞಾಸೆ. ಅದಕ್ಕೆ ಸಮರ್ಥನೆಯಾಗಿ ಹಿಂದಿನ ಕಾವ್ಯಗಳಿಂದ ಅಲ್ಲಲ್ಲಿ ಪದ್ಯಗಳನ್ನು ಉದಾಹರಿಸಿ ವ್ಯಾಖ್ಯಾನಿಸಿರುವುದು ಕಂಡುಬರುತ್ತದೆ. ಆ ವ್ಯಾಖ್ಯಾನದಲ್ಲಿ ಕೆಲವು ವೇಳೆ (ಅದರಲ್ಲಿಯೂ ಕುಂತಕ, ಕ್ಷೇಮೇಂದ್ರ ಇಂತಹವರಲ್ಲಿ) ವಿಮರ್ಶೆಯ ಅಂಶ ಇಣುಕುತ್ತದೆ. ಆದರೂ ಮುಖ್ಯವಾಗಿ ತತ್ವ ಸಿದ್ಧಾಂತಗಳು ಇಲ್ಲಿ ಪ್ರಧಾನ. ಆ ತತ್ವಗಳನ್ನು ಯಾವುದೇ ಒಂದು ಕಾವ್ಯಕ್ಕೆ ಇಲ್ಲವೇ ಕಾವ್ಯಭಾಗಕ್ಕೆ ಅನ್ವಯಿಸಿ ನೋಡುವ ವಿಮರ್ಶಾ ಪ್ರಯತ್ನ ಇಲ್ಲಿ ಹೆಚ್ಚಾಗಿ ನಡೆಯಲಿಲ್ಲ.

ಪ್ಯಾಶ್ಚಾತ್ಯರಲ್ಲಿಯೂ ಪ್ರಾರಂಭದಲ್ಲಿ ಮೀಮಾಂಸೆಯೇ ಪ್ರಧಾನವಾಗಿರುವಂತೆ ಕಾಣುತ್ತದೆ. ಅರಿಸ್ಟಾಟಲನ ಕಾವ್ಯಮೀಮಾಂಸೆಯಲ್ಲಿ ರುದ್ರನಾಟಕದ ಸ್ವರೂಪವನ್ನು ಕುರಿತ ಜಿಜ್ಞಾಸೆಯೇ ಪ್ರಧಾನವಾಗಿದೆ. ಅನಂತರ ರೋಮನ್‌ಯುಗದಲ್ಲಿ ಪ್ರಮುಖನಾದ ಹೋರೇಸ್ ಆಗಲೀ, ಲಾಂಜಿನಸ್ ಆಗಲೀ, ಕಾವ್ಯತತ್ವದ ಜಿಜ್ಞಾಸುಗಳೇ ಹೊರೆತು ವಿಮರ್ಶರಲ್ಲ.

ಈ ಜಿಜ್ಞಾಸೆ ಮೀಮಾಂಸೆಗಳೂ, ವಿಮರ್ಶಾವಲಯದಲ್ಲಿಯೇ ಸೇರಬೇಕಾದುವುಗಳು. ಅವು ನೇರವಾಗಿ ಯಾವುದೇ ಕಾವ್ಯವನ್ನು ವಿಮರ್ಶಿಸುವುದಕ್ಕೆ ತೊಡಗಿದ್ದರೂ ಅಂತಹ ವಿಮರ್ಶೆಗೆ ಅಗತ್ಯವಾದ ಸೂತ್ರಗಳನ್ನು ಕಂಡುಕೊಳ್ಳಲು ನೆರವಾಗುತ್ತವೆ. ಕವಿ ಎಂದರೆ ಯಾರು? ಕಾವ್ಯವೆಂದರೆ ಏನು?- ಈ ಮೊದಲಾದವುಗಳ ಪ್ರತಿಪಾದನೆ ಮತ್ತು ವಿವರಗಳನ್ನುಳ್ಳ ಇದನ್ನು ಶಾಸನಾತ್ಮಕ ವಿಮರ್ಶೆ(Legislative Criticism) ಮತ್ತು ಸೈದ್ಧಾಂತಿಕ ವಿಮರ್ಶೆ (Theoretical Criticism) ಎಂದು ಕರೆಯಬಹುದು.[1] 'ಕಾವ್ಯವನ್ನು ಹೇಗೆ ಬರೆಯಬೇಕು' ಎಂದು ಹೇಳುವುದು ಶಾಸನಾತ್ಮಕ; 'ಕಾವ್ಯದ ಲಕ್ಷಣ ಇದು' ಎಂಬ ಸಿದ್ಧಾಂತದ ನಿರೂಪಣೆ ಎರಡನೆಯ ಬಗೆ. ಇವೆರಡೂ ಮೀಮಾಂಸಾತ್ಮಕ.

ಇನ್ನೊಂದು ಬಗೆಯ 'ವಿಮರ್ಶೆ' ಎಂದರೆ ಉದ್ದಿಷ್ಟ ಕೃತಿಯೊಂದನ್ನು ಮುಖ್ಯವಾಗಿಟ್ಟುಕೊಂಡು ಅದರ ವಿವರಣೆ ವಿಶ್ಲೇಷಣೆಗಳಿಂದ ಅದರ ಮೌಲ್ಯವನ್ನು ಅಳೆಯುವುದು. ಇದನ್ನು ವ್ಯಾಪಕವಾದ ಅರ್ಥದಲ್ಲಿ 'ವಿವರಣಾತ್ಮಕ ವಿಮರ್ಶೆ' (Descriptive Criticism) ಎನ್ನಬಹುದು. ಈಗ ನಾವು ಬಳಸುವ 'ವಿಮರ್ಶೆ' ಎಂಬುದು ಈ ಅರ್ಥವನ್ನುಳ್ಳದ್ದು. ಮೀಮಾಂಸೆಯಲ್ಲಿ ಸಿದ್ಧಾಂತ ಪ್ರಧಾನ; ಅದರ ಸಮರ್ಥನೆಗೆ ಕಾವ್ಯದ ಉದಾಹರಣೆಗಳು ಬೇಕು. ಆದರೆ ವಿಮರ್ಶೆಯಲ್ಲಿ ಕಾವ್ಯವೇ ಪ್ರಧಾನ; ಅದರ ವಿಶ್ಲೇಷಣೆಗೆ ಸಿದ್ಧಾಂತದ ಹಿನ್ನೆಲೆ ಅಗತ್ಯ. ಈ ಅರ್ಥದಲ್ಲಿ ಪಾಶ್ಚಾತ್ಯರಲ್ಲಿಯೂ ವಿಮರ್ಶೆ ಬೆಳೆದುಬಂದದ್ದು ೧೬-೧೭ನೇ ಶತಮಾನಗಳಿಂದೀಚೆಗೆ. ಜಾನ್‌ಡ್ರೈಡನ್ ಇದಕ್ಕೆ ತಳಹದಿಯನ್ನು ಹಾಕಿದವರಲ್ಲಿ ಪ್ರಮುಖ. ಅದಕ್ಕಿಂತ ಹಿಂದಿನ ಸಿಡ್ನಿಯ 'Apologie for Poetrie' ಎಂಬುದು ವಿಮರ್ಶೆಗಿಂತ ಹೆಚ್ಚಾಗಿ ಸಿದ್ಧಾಂತಕ್ಕೇ ಸೇರುತ್ತದೆ.

ಡ್ರೈಡನ್ನಿನಿಂದ ಈಚೆಗೆ ಈ ಬಗೆಯ ವಿವರಣಾತ್ಮಕ ವಿಮರ್ಶೆ ಅಲ್ಲಿ ಬೆಳೆಯ ತೊಡಗಿತು. ೧೮ನೇ ಶತಮಾನದಲ್ಲಿ ಪೋಪ್, ಎಡಿಸನ್, ಹೆನ್ರಿಫೀಲ್ಡಿಂಗ್, ಮೊದಲಾದವರು ವಿಮರ್ಶೆಯನ್ನು

---

[1] George Watson, *The Literary Critics.*

ಮುಂದುವರಿಸಿಕೊಂಡು ಬಂದರು. ಸ್ಯಾಮುಯಲ್ ಜಾನ್‌ಸನ್ ಈ ರಂಗದಲ್ಲಿ ಇನ್ನೊಂದು ದೊಡ್ಡ ಹೆಸರು. ಆತನ *Lives of the Poets* - ವಿಮರ್ಶೆಯ ವಲಯಕ್ಕೆ ಆಧಾರ ಸ್ತಂಭವಾಗಿ ಪರಿಣಮಿಸಿತು. ೧೯ನೇ ಶತಮಾನದಲ್ಲಿ ವಿಮರ್ಶೆ ಬಹುಮುಖವಾಗಿ ವೈವಿಧ್ಯಪೂರ್ಣವಾಗಿ ಬೆಳೆಯತೊಡಗಿತು. ವರ್ಡ್ಸ್‌ವರ್ತ್, ಕೋಲಿಂಜ್, ಶೆಲ್ಲಿ - ಇವರು ಕವಿಗಳೂ ಹೌದು, ಒಂದರ್ಥದಲ್ಲಿ ವಿಮರ್ಶಕರೂ ಹೌದು. ವರ್ಡ್ಸ್‌ವರ್ತ್ ತನ್ನ *Lyrical Ballads* ಗೆ ಬರೆದ ಪೀಠಿಕೆಯಲ್ಲಿ ಕಾವ್ಯವಿಮರ್ಶೆಯ ಕೆಲವು ಅಂಶಗಳನ್ನು ಪ್ರತಿಪಾದಿಸಿದ. ಕೋಲರಿಜ್ ಅವುಗಳನ್ನು ವಿಮರ್ಶಾತ್ಮಕವಾಗಿ ವಿವೇಚಿಸಿ ಆತನ ಕಾವ್ಯನಿರ್ಮಿತಿಗೂ ಸಿದ್ಧಾಂತಕ್ಕೂ ಇರುವ ಅಂತರವನ್ನು ತೋರಿಸಿಕೊಟ್ಟ. ಕೋಲರಿಜ್ ಬರೆದ *Biographia Litearia* ಸೈದ್ಧಾಂತಿಕ ವಿಮರ್ಶೆಯ ಗುಂಪಿಗೆ ಸೇರುವ ಕೃತಿ. ಆದರೆ ಅದರಲ್ಲಿ ಆತ ಉದಾಹರಣೆಗಳ ರೂಪವಾಗಿ ಕೊಡುವ ವಿವರಣಾತ್ಮಕ ವಿಮರ್ಶೆ, ಆತ ಒಳ್ಳೆಯ ವಿಮರ್ಶಕನೆಂಬುದನ್ನೂ ತೋರಿಸಿಕೊಟ್ಟಿತು. ಚಾರ್ಲಸ್ ಲ್ಯಾಂಬ್, ವಿಲಿಯಮ್ ಹ್ಯಾಜಿಲೆಟ್, ಥಾಮಸ್‌ಡಿಕ್ವೆನ್ಸಿ, ಮೊದಲಾದ ಅನೇಕ ವಿಮರ್ಶಕರನ್ನು ಇಲ್ಲಿ ಕಂಡರೂ ಈ ಶತಮಾನದ ಬಹು ದೊಡ್ಡ ವಿಮರ್ಶಕನೆಂದರೆ ಮ್ಯಾಥ್ಯೂ ಆರ್ನಾಲ್ಡ್. ಈತ ವಿಮರ್ಶೆಯ ಗೊತ್ತುಗುರಿಗಳನ್ನು ಆಳವಾಗಿ ಆಲೋಚಿಸಿ ಕೆಲವು ನಿಯಮಗಳನ್ನು ನಿರೂಪಿಸಿದುದಲ್ಲದೆ ಅವುಗಳನ್ನು ಅನ್ವಯಿಸಿಯೂ ತೋರಿಸಿದ. ಹೆನ್ರಿ ಜೇಮ್ಸನ ಸಾಧನೆಯೂ ಇಲ್ಲಿ ಗಣನೀಯವಾದುದು. ಜಾರ್ಜ್ ಸೆಯಿಂಟ್ಸ್‌ಬರಿ, ಅರ್ಥರ್ ಕ್ವಿಲ್ಲರ್‌ಕೌಚ್ ಮೊದಲಾದವರನ್ನೂ ಸ್ಮರಿಸಿಕೊಳ್ಳಬಹುದು.

೧೯ನೇ ಶತಮಾನದ ಕೊನೆ ಮತ್ತು ೨೦ನೇ ಶತಮಾನದ ಪ್ರಾರಂಭದಲ್ಲಿ ವಿಮರ್ಶೆ ಬಹುಮುಖವಾಗಿ ಹೊಸಹೊಸ ತತ್ವಗಳನ್ನು ಅವಲಂಬಿಸಿ ಬೆಳೆಯತೊಡಗಿತು. ಟಿ.ಎಸ್. ಎಲಿಯಟ್, ಐ.ಎ. ರಿಚರ್ಡ್ಸ್, ಮಿಡ್ಲ್‌ಟನ್ ಮರ್ರೆ, ಎಫ್. ಆರ್. ಲೀವಿಸ್ - ಈ ಒಂದೊಂದು ಹೆಸರೂ ವಿಮರ್ಶೆಯಲ್ಲಿ ಒಂದೊಂದು ಘಟ್ಟವನ್ನು ಸೂಚಿಸುವಂತಹುದು. ಈಚೆಗಂತೂ ವಿಮರ್ಶೆ, ಮನಸ್ಶಾಸ್ತ್ರ, ಸಮಾಜಸಾಸ್ತ್ರ, ಮೊದಲಾದುವುಗಳ ಆಧಾರದಿಂದ ಹೊಸ ಹೊಸ ವಲಯಗಳನ್ನು ನಿರ್ಮಿಸುತ್ತಿದೆ. ಸಾಹಿತ್ಯ ಪ್ರಕಾರದಲ್ಲಿ ಹೊಸ ಪ್ರಯೋಗಗಳಾದಂತೆ ವಿಮರ್ಶೆಯೂ ಅದಕ್ಕನುಗುಣವಾಗಿ ತನ್ನ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುವುದು ಅಗತ್ಯವಾಗುತ್ತಿದೆ.

ಭಾರತೀಯ ಸಾಹಿತ್ಯದಲ್ಲಿಯೂ ಇದೊಂದು ಹೊಸಯುಗ. ಆಂಗ್ಲ ಸಾಹಿತ್ಯದ ಪರಿಚಯ ಒಂದು ಹೊಸ ಯುಗವನ್ನು ಭಾರತೀಯ ಸಾಹಿತ್ಯ, ಅಂತೆಯೇ ಕನ್ನಡ ಸಾಹಿತ್ಯದಲ್ಲಿಯೂ ಪ್ರಾರಂಭಿಸಿತು. ಸಾಹಿತ್ಯದ ಸೀಮಿತ ಕ್ಷೇತ್ರ, ವಿಸ್ತಾರವೂ ವಿಪುಲವೂ ವೈವಿಧ್ಯಮಯವೂ ಆಗಿ ಬೆಳೆಯತೊಡಗಿತು. ಕಾದಂಬರಿ, ಸಣ್ಣಕಥೆ, ಭಾವಗೀತೆ, ಪ್ರಬಂಧ, ಮೊದಲಾದ ಹೊಸ ಪ್ರಕಾರಗಳನ್ನೂ ಕನ್ನಡ ಸಾಹಿತ್ಯ ಅಳವಡಿಸಿಕೊಂಡಿತು. ಇವುಗಳ ಜೊತೆಯಲ್ಲಿ ವಿಮರ್ಶೆಯ ಪ್ರಕಾರವೂ ಬೆಳೆದು ಬಂದಿತು.

ಆಂಗ್ಲ ಸಾಹಿತ್ಯದಲ್ಲಿ ಬೆಳೆದುಬಂದ ವಿಮರ್ಶೆಯ ಪದ್ಧತಿಯನ್ನು ನೋಡಿದ ನಮ್ಮ ವಿದ್ವಾಂಸರು ಅದರಿಂದ ಪ್ರಭಾವಿತರಾದರು. ಆ ವಿಮರ್ಶೆಯ ಹೊಸ ಪರಿಭಾಷೆಯನ್ನು ಬಳಸಿಕೊಂಡು ನಮ್ಮ ಕಾವ್ಯಗಳ ಬೆಲೆಯನ್ನು ಅಳೆಯುವುದಕ್ಕೆ ಪ್ರಯತ್ನಿಸಿದರು. ಭಾರತೀಯ ಕಾವ್ಯಮೀಮಾಂಸೆಯ ಪರಿಭಾಷೆ, ಈ ಹೊಸ ನೋಟಕ್ಕೆ ಹಳತೆಂಬಂತೆ ಕಂಡಿತು. ಆದರೆ ಅಲ್ಲಿನ ಕೆಲವು ತತ್ವಗಳಾದರೂ ಆಧುನಿಕ ವಿಮರ್ಶೆಯ ಒರೆಗಲ್ಲಿನ ಮೇಲೆ ಶಾಶ್ವತ ಸತ್ಯಗಳಾಗಿ ಹೊಳೆದುವು. ಉದಾಹರಣೆಗೆ

ಧ್ವನಿ-ರಸ ತತ್ವಗಳನ್ನು ಹೇಳಬಹುದು. ಸಾಹಿತ್ಯದ ಅಭಿವ್ಯಕ್ತಿಯಲ್ಲಿ ಎಷ್ಟೇ ಬದಲಾವಣೆಯಾದರೂ, ಕಾಲ ಸನ್ನಿವೇಶ ಪರಿಸರಗಳಿಗೆ ಅನುಗುಣವಾದ ರೀತಿಯಲ್ಲಿ ರಚಿತವಾದ ಯಾವುದೇ ಕಾವ್ಯವಾದರೂ ಅಥವಾ ಸಾಹಿತ್ಯದ ಯಾವುದೇ ಪ್ರಕಾರವಾದರೂ ಅದಕ್ಕೆ ಈ ತತ್ವಗಳನ್ನೂ ಅನ್ವಯಿಸಬಹುದು. ಆಧುನಿಕ ವಿಮರ್ಶೆಯ ಸೂತ್ರಗಳಿಗೆ ಅವಿರುದ್ಧವಾದ ರೀತಿಯಲ್ಲಿ ಅವುಗಳನ್ನು ಬಳಸಿಕೊಳ್ಳಬಹುದು. ಇಲಿಯಡ್, ಒಡೆಸ್ಸಿ, ರಾಮಾಯಣ, ಮಹಾಭಾರತ, ಡಿವೈನ್ ಕಾಮಿಡಿ, ಪ್ಯಾರಡೈಸ್ ಲಾಸ್ಟ್, ಮುಂತಾದ ಮಹಾಕಾವ್ಯಗಳಿಗೆ, ರುದ್ರನಾಟಕ ಸುಖಾಂತ ನಾಟಕಗಳಿಗೆ, 'ವಾರ್ ಅಂಡ್ ಪೀಸ್' ನಿಂದ ಹಿಡಿದು 'ಯೂಲಿಸಿಸ್' ಕಾದಂಬರಿಯವರೆಗೆ- ಎಲ್ಲ ಸಾಹಿತ್ಯ ಪ್ರಕಾರಗಳ ಬಣ್ಣವನ್ನು ಈ ತತ್ವಗಳ ಒರೆಗಲ್ಲು ತೋರಿಸಬಲ್ಲದು. ಆದರೆ ಅವುಗಳನ್ನು ಆಯಾ ಹಂತದಲ್ಲಿ ಬಳಸುವ ಜಾಣ್ಮೆ ಬೇಕು.

ಮಾನವನ ನಾಗರಿಕತೆ ಬೆಳೆಯುತ್ತ ಬಂದಂತೆ, ಅವನ ಅನುಭವ ಹೆಚ್ಚು ಸಂಕೀರ್ಣವಾದಂತೆ ಅವನ ಅಭಿವ್ಯಕ್ತಿಯ ಮಾಧ್ಯಮವೂ, ಸಾಹಿತ್ಯ ಪ್ರಕಾರಗಳೂ, ಬೆಳೆಯುತ್ತಾ ಬಂದುವು. ನಾಗರಿಕತೆಯ ಪ್ರಾರಂಭದ ದೆಸೆಯಲ್ಲಿ ಭಾಷೆಯನ್ನು ಆತ ಮೊದಲು ಕಂಡುಕೊಂಡಾಗ ಬಹುಶಃ ಆತ ಆಡಿದ ಮಾತೆಲ್ಲವೂ ಕಾವ್ಯವೇ. ಅನಂತರ ಆತನ ಬುದ್ಧಿ ಭಾವಗಳು ಬೆಳೆಯುತ್ತಾ ಬಂದಂತೆ ಭಾಷೆಯೂ ಬೆಳೆಯಿತು; ಶಾಸ್ತ್ರ ಮತ್ತು ಸಾಹಿತ್ಯ ಎಂದು ಬೇರೆಬೇರೆಯಾಯಿತು. ಒಂದು ಶಾಸ್ತ್ರೋಪಯೋಗಿ ಭಾಷೆ; ಇನ್ನೊಂದು, ಭಾವೋಪಯೋಗಿ ಭಾಷೆ. ಭಾವದ ವಿಕಾಸಕ್ಕೆ ಸಂಕೀರ್ಣತೆಗೆ ಅನುಗುಣವಾಗಿ ಭಾವೋಪಯೋಗಿ ಭಾಷೆಯು ಹೊಸಹೊಸ ರೂಪಗಳನ್ನು ಧರಿಸುತ್ತಾ ಹೊಸಹೊಸ ಶಕ್ತಿಯನ್ನು ಪಡೆಯುತ್ತಾ ಬಂದಿರುವುದನ್ನು ಆಯಾ ಭಾಷೆಗಳ ಸಾಹಿತ್ಯದ ವಿಕಾಸ ತೋರಿಸಿಕೊಡುತ್ತದೆ.

ನಮ್ಮಲ್ಲಿಯೇ ನೋಡುವುದಾದರೆ ಅಷ್ಟಾದಶ ವರ್ಣನೆಗಳು ಕಾವ್ಯದ ಜೀವಾಳವೆಂದು ಭಾವಿಸಿದ ಕಾಲವೊಂದಿತ್ತು. ಅದಕ್ಕೆ ಶರಣಾಗಿ ಕನ್ನಡದ ಪ್ರತಿಭಾವಂತ ಕವಿಗಳೂ ಕೆಲವು ಕಡೆ ತೊಳಲಾಡಿರುವುದು ಕಂಡುಬರುತ್ತದೆ. 'ಗಿರಿಜಾಕಲ್ಯಾಣ' ದಲ್ಲಿ ಈ ಸಂಪ್ರದಾಯಕ್ಕೆ ಸಿಕ್ಕುಬಿದ್ದ ಹರಿಹರ, ನಾರದನನ್ನೂ ಸೂಳೆಗೇರಿಯಲ್ಲಿ ಅಲೆದಾಡಿಸಿದ್ದಾನೆ. ಹರಿಶ್ಚಂದ್ರ ಕಾವ್ಯದಲ್ಲಿ ಇದಕ್ಕೆ ಒಳಗಾದ ರಾಘವಾಂಕ, ಸಿದ್ಧರಾಮ ಚಾರಿತ್ರದಲ್ಲಿ ಇದನ್ನು ಮೀರಿ ನಿಲ್ಲಬಲ್ಲ ನಿಲವಿಗೆ ಬಂದಿದ್ದಾನೆ: "ವರಸುಧಾರೋಗಣೆಗೆ ಮಾಧುರದ ಹಂಗೇಕೆ? ತರಣಿಯೋಲಗಕೆ ಸೊಡರಂ ಪಿಡಿವ ತೊಡಕೇಕೆ? ಪರುಷದಾ ಭರಣಗೆಲಸಕ್ಕೆ ಮಿಸುನಿಯನರಸಿ ತೊಳಲುವಾಯಸವೇತಕೆ?" - ಎಂದು ಹೇಳುತ್ತಾ ರಾಘವಾಂಕ 'ನೆರೆದ ಸೊಗಸಿದ ಸುಗ್ಗಿ, ರಸದ ಮಡು, ಪುಣ್ಯದಾಗರವೆನಿಪ ಸಿದ್ಧರಾಮನ ಕಥೆಗೆ ಕಾವ್ಯಮಂ ವಿರಚಿಸುವೊಡಷ್ಟಾದಶ ಸ್ಥಲವ ಪೊಗಳಲೇಕೆ ಎಂದು ಕೇಳುತ್ತಾನೆ.

ಹೀಗೆ ಸಮರ್ಥ ಕವಿ ಹಿಂದಿನ ಸಂಪ್ರದಾಯವನ್ನು ಮುರಿದು ಸತತ ಪ್ರಯತ್ನದಿಂದ ತನ್ನ ಮಾರ್ಗವನ್ನು ಕಂಡುಕೊಳ್ಳುತ್ತಾನೆ. ಸಮಷ್ಟಿ ಮನಸ್ಸಿನ ನಿರಂತರ ಪ್ರವಾಹದ ಐತಿಹಾಸಿಕ ಪ್ರಜ್ಞೆಗೆ ತನ್ನನ್ನು ಸಮರ್ಪಿಸಿಕೊಂಡ ಕವಿ, ಅದನ್ನು ಕಾವ್ಯದಲ್ಲಿ ಇಳಿಸಿತರಲು ತನ್ನದೇ ಆದ ಮಾರ್ಗವನ್ನು ಕೈಕೊಳ್ಳುತ್ತಾನೆ. ಕಲಾವಿದನ ಆಯಾ ಮಾರ್ಗಗಳನ್ನು ಕಂಡುಕೊಳ್ಳಬೇಕಾಗಿರುವ ವಿಮರ್ಶೆಯು ಸಾಹಿತ್ಯಸೃಷ್ಟಿಯೊಡನೆ ಬೆಳೆಯಬೇಕಾಗುತ್ತದೆ, ಹೊಸ ಹೊಸ ವಿಧಾನಗಳನ್ನು ಕೈಗೊಳ್ಳಬೇಕಾಗುತ್ತದೆ.

ಪಾಶ್ಚಾತ್ಯ ವಿಮರ್ಶೆಯಲ್ಲಿ ಹೊಸಹೊಸ ವಿಧಿ ವಿಧಾನಗಳು ಕಾಣಿಸಿಕೊಳ್ಳುತ್ತಿರುವುದಕ್ಕೆ ಇದೇ

ಕಾರಣ. ಕಾವ್ಯೋದ್ದೇಶ ಮತ್ತು ಕಾವ್ಯಾಭಿವ್ಯಕ್ತಿಯಲ್ಲಿ ಕಂಡುಬರುವ ವೈವಿಧ್ಯಗಳೇ ಇದನ್ನು ನಿಯಂತ್ರಿಸುವ ಶಕ್ತಿಗಳೆನ್ನಬಹುದು. ಸಮಾಜದ ಸಂಕೀರ್ಣತೆಗೆ ಸಾಹಿತ್ಯ, ಕನ್ನಡಿ ಹಿಡಿಯಬೇಕು; ಜೀವನದ ಯಥಾವತ್ತಾದ ಚಿತ್ರ ಬಿಡಿಸಿ ತೋರಿಸಬೇಕು; ಸಮಾಜದ ಏರುಪೇರುಗಳನ್ನು ನಿರ್ದಾಕ್ಷಿಣ್ಯವಾಗಿ ಎತ್ತಿ ತೋರಿಸಬೇಕು; - ಇತ್ಯಾದಿ ಹಲವಾರು ಆಶಯಗಳು ಸಾಹಿತ್ಯದ ಮುಂದೆ ನಿಂತಿವೆ. 'ಕಲೆಗಾಗಿ ಕಲೆ' ಎಂಬ ಲಘು ಮನೋಧರ್ಮದಿಂದ ಪಾರಾಗಿ ಜೀವನದ ಒಂದು ಗಂಭೀರ ಉದ್ದೇಶಕ್ಕಾಗಿ ಕಲೆ ಎನ್ನುವ ಈ ಎಲ್ಲ ದೃಷ್ಟಿಗಳೂ ಮೆಚ್ಚತಕ್ಕವೆ. ಆದರೆ ಅನೇಕ ವೇಳೆ ಈ ದೃಷ್ಟಿ ಪ್ರಬಲವಾಗಿ ಸಾಹಿತ್ಯದ ಮೂಲ ಬೇರಿಗೇ ಬೆನ್ನೀರನ್ನೆರೆಯುವುದರಲ್ಲಿ ಪರ್ಯವಸಾನವಾಗುತ್ತದೆ. ಮನಸ್ಸಿನ ವಿಶ್ಲೇಷಣೆಯ ಆಶಯ, ವಿಕೃತಿ ಚಿತ್ರಣದಲ್ಲಿ; ವಾಸ್ತವತೆ ಎಂಬುದು ಅತಿಯಾಗಿ ಭಾವವನ್ನೇ ಹಸಿಹಸಿಯಾಗಿ ಕೊಡುವ ಉದ್ರೇಕ ನಿರೂಪಣೆಯಲ್ಲಿ; ಸಮಾಜದ ಹಿತದೃಷ್ಟಿ, ಆದರ್ಶ ಭಾಷಣಗಳಲ್ಲಿ, ಪ್ರಚಾರದಲ್ಲಿ ಪರ್ಯವಸಾನವಾಗಬಹುದು. ಆದರೆ ಇವು ಕಲಾತ್ಮಕವಾಗಿ ಅಭಿವ್ಯಕ್ತವಾಗದಿದ್ದರೆ ಸಾಹಿತ್ಯದ ವಲಯದೊಳಕ್ಕೆ ಬರಲಾರವೆಂಬುದನ್ನು ಮರೆಯಬಾರದು.

ಈ ಕಲಾತ್ಮಕ ಅಭಿವ್ಯಕ್ತಿ ಎಂದರೇನು? ಧ್ವನಿ-ರಸ ಸಿದ್ಧಾಂತದ ಸಾರ್ಥಕ ಕಂಡುಬರುವುದು ಇಲ್ಲಿಯೇ. ಕಲೆ ಭಾವಾನುಭವವಲ್ಲ; ಲೌಕಿಕ ಕಲೆಯಲ್ಲಿ ವಿಭಾವವಾಗುತ್ತದೆ. ಇದನ್ನೇ ಎಲಿಯಟ್ 'ಭಾವವಿಮೋಚನೆ' (Escape from Emotion) ಎಂದು ಹೇಳಿರುವುದನ್ನು ಹಿಂದೆ ನೋಡಿದ್ದೇವೆ. ಲೌಕಿಕಭಾವ (ಸ್ಥಾಯಿಭಾವ), ಕವಿಯ ಧ್ಯಾನಜಿಹ್ವೆಯಲ್ಲಿ ಚರ್ವಿತವಾಗಿ ಅದು ರಸಾತ್ಮಕವಾಗಿ ಮೂಡಿಬರುತ್ತದೆ. ಭಾಷೆಯನ್ನು ಅದು ಅವಲಂಬಿಸಿದರೂ, ಅದರಿಂದ ಸೂಚಿತವಾಗುವ ಧ್ವನಿಶಕ್ತಿಯಿಂದ, ಮಾತಿಗೆ ಮೀರಿದ ಅನುಭವವನ್ನು ತಂದುಕೊಡುತ್ತದೆ. ಕಾವ್ಯ ಮಾತ್ರವಲ್ಲ, ಸಾಹಿತ್ಯವಲಯದೊಳಗೆ ಬಂದ ಎಲ್ಲ ಪ್ರಕಾರಗಳನ್ನೂ ಈ ಒರೆಗಲ್ಲಿನ ಮೇಲೆ ಉಜ್ಜಬೇಕಾದುದು ವಿಮರ್ಶೆಯ ಮೂಲಭೂತವಾದ ಅಂಶ. ಅನಂತರ ಇತರ ಮೌಲ್ಯಗಳ ವಿವೇಚನೆಯಿಂದ ಕೃತಿಯ ಬೆಲೆಗಟ್ಟಬೇಕಾಗುತ್ತದೆ. ಅದಕ್ಕಾಗಿ ವಿಮರ್ಶೆ ಕೆಲವು ಮಾರ್ಗಗಳನ್ನು ರೂಪಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ.

## 2.4. ವಿಮರ್ಶೆಯ ವಿವಿಧಮಾರ್ಗಗಳು

ಕಾಲಕಾಲಕ್ಕೆ ಬಹುಶಃ ಶತಮಾನಕ್ಕೊಮ್ಮೆಯಾದರೂ, ಸಮರ್ಥನಾದ ವಿಮರ್ಶಕ ಬಂದು ಹಿಂದಿನ ಸಾಹಿತ್ಯವನ್ನೆಲ್ಲಾ ಪರಿಶೀಲಿಸಿ ಒರೆಗೆ ಹಚ್ಚಿ, ಆಯಾ ಕೃತಿಗಳ ವಿಚಾರದಲ್ಲಿ ಒಂದು ಹೊಸ ವ್ಯವಸ್ಥೆಯನ್ನು ಏರ್ಪಡಿಸುವುದು ಅಪೇಕ್ಷಣೀಯವೆಂದು ಎಲಿಯಟ್ ಅಭಿಪ್ರಾಯ ಪಡುತ್ತಾನೆ[1]. ಇದರ ಅರ್ಥ ಕಾಲಕಾಲಕ್ಕೆ ವಿಮರ್ಶೆಯ ಸೂತ್ರಗಳಲ್ಲಿ ಬದಲಾವಣೆ ಅಥವಾ ಬೆಳವಣಿಗೆ ಕಂಡುಬರುತ್ತದೆ. ಅದಕ್ಕನುಗುಣವಾಗಿ ವಿಮರ್ಶೆಯ ಮಾರ್ಗಗಳೂ ಬದಲಾಗುತ್ತವೆ. ಇದಕ್ಕೆ ಕಾರಣ, ಹೊಸಹೊಸ ಅನುಭವಗಳಿಂದ ಕೂಡಿ ಸಂಕೀರ್ಣವಾಗಿ ಬೆಳೆಯುತ್ತಿರುವ ನಿರಂತರ ಪರಿವರ್ತನ ಶೀಲವಾದ ಸಮಾಜ; ಮತ್ತು ಆ ಜನಾಂಗದ ಜೀವನವನ್ನು ಅವಲಂಬಿಸಿದ ಸಾಹಿತ್ಯ.

[1] "From time to time, every hundred years or so, it is desirable that some critic shall appear to review the past of our literature, and set the poets and poems in a new order".
- Eliot T.S. *Selected prose* (Ed. John Hayward), p.17, (1958).

ಜೀವನಕ್ಕೂ ಸಾಹಿತ್ಯಕ್ಕೂ ಯಾವ ಸಂಬಂಧವಿದೆಯೋ ಅದೇ ಸಂಬಂಧ ಸಾಹಿತ್ಯಕ್ಕೂ ವಿಮರ್ಶೆಗೂ ಇದೆ. ಜೀವನದ ಅನುಭವ, ಸಾಹಿತ್ಯಕ್ಕೆ ಪ್ರೇರಕವಾದರೆ ಸಾಹಿತ್ಯ ಕೃತಿಗಳಿಂದ ಪಡೆದ ಅನುಭವ ವಿಮರ್ಶೆಗೆ ಕಾರಣವಾಗುತ್ತದೆ. ವಿಮರ್ಶಕನ ಮುಂದಿರುವುದು ಸಾಹಿತ್ಯ ಕೃತಿ; ಆತನ ಮುಖ್ಯವಾದ ಉದ್ದೇಶ ಕೃತಿಯ ವಿಶ್ಲೇಷಣೆ ಮತ್ತು ಆ ಮೂಲಕವಾಗಿ ಓದುಗರ ಅಭಿರುಚಿಯನ್ನು ರೂಪಿಸುವುದು.

"Criticism must always profess an end in view, which, roughly speaking, appears to be the elucidation of works of art and the correction of taste;" [1]

ಎಂಬ ಎಲಿಯಟ್ಟನ ಮಾತು ತುಂಬಾ ಸಮಂಜಸವಾದದ್ದು. ಈ ಎರಡು ಕರ್ತವ್ಯಗಳನ್ನು ಎಷ್ಟರಮಟ್ಟಿಗೆ ನಿರ್ವಹಿಸುತ್ತಾನೆಂಬುದರ ಮೇಲೆ ವಿಮರ್ಶಕನ ಯೋಗ್ಯತೆ ನಿಂತಿದೆ.

ಇವುಗಳಲ್ಲಿ ಮೊದಲನೆಯದು ಕಲಾಕೃತಿಗಳ ವಿಶ್ಲೇಷಣೆ ಮತ್ತು ಆ ಮೂಲಕ ಅವುಗಳ ಸ್ವರೂಪ ನಿರೂಪಣೆ. ಇದು ವಿವರಣೆ ಆಗಬಹುದು, ವರ್ಣನೆ ಆಗಬಹುದು. ಕೃತಿಯಲ್ಲಿ ಸಾಮಾನ್ಯ ಓದುಗ ಗಮನಿಸದೇ ಹೋಗಬಹುದಾದ ಅಂಶಗಳನ್ನು ಎತ್ತಿ ಹೇಳಿ, ಅವುಗಳ ಔಚಿತ್ಯವನ್ನು ಸೂಚಿಸಿ, ಕೃತಿಯ ಚಿಪ್ಪನ್ನು ಭೇದಿಸಿ ಅಲ್ಲಿರುವ ಮುತ್ತುಗಳನ್ನು ತರುವುದು ಆತನ ಕೆಲಸ ಆ ಸಾಹಸದಲ್ಲಿ ಓದುಗರ ಅಭಿರುಚಿಯನ್ನು ಆತ ತಿದ್ದುತ್ತಾನೆ.

ವಿಮರ್ಶಕನಿಗೆ ಇದನ್ನು ಸಾಧಿಸಲು ಅಗತ್ಯವಾದ ಅರ್ಹತೆಗಳು ಮೂರು ಎಂದು ರಿಚರ್ಡ್ಸ್ ಹೇಳುತ್ತಾನೆ[2] ತಾನು ವಿಮರ್ಶಿಸುತ್ತಿರುವ ಕೃತಿಯಲ್ಲಿ ಅಭಿವ್ಯಕ್ತಗೊಂಡ ಕಲಾನುಭವವನ್ನು, ತನ್ನ ವೈಯಕ್ತಿಕ ವೈಚಿತ್ರಗಳೇನನ್ನೂ, ಅಂಟಿಸದೆ, ಅನುಭವಿಸುವ ಶಕ್ತಿ ಮೊದಲನೆಯದು ಎರಡನೆಯದು ಅನುಭವಗಳ ಸ್ವರೂಪ ಮತ್ತು ತೀವ್ರತೆಯಲ್ಲಿ ತಾರತಮ್ಯವನ್ನು ಕಂಡುಕೊಳ್ಳುವ ಶಕ್ತಿ ಮತ್ತು ಕೊನೆಯದು ಮೌಲ್ಯಗಳ ನಿರ್ಣಯದಲ್ಲಿ ಪರಿಪಕ್ವ ಪರಿಶ್ರಮ ಎಲ್ಲ ಬಗೆಯ ವಿಮರ್ಶೆಯಲ್ಲಿಯೂ ಇರಬೇಕಾದ ಅನಿವಾರ್ಯವಾದ ಅಂಶಗಳು ಈ ಮೂರು ಎನ್ನಬಹುದು.

ಕೃತಿಯ ಕೇಂದ್ರ ಬಿಂದು ಯಾವುದು? ಅದರ ಸುತ್ತಲೂ ವಸ್ತು ವಿನ್ಯಾಸಗೊಂಡ ಬಗೆ ಹೇಗೆ? ಅಭಿವ್ಯಕ್ತಿಯ ಶಕ್ತಿ ಏನು? ಈ ಪ್ರಶ್ನೆಗಳು ವಿಮರ್ಶಕನ ಮುಂದೆ ನಿಲ್ಲುತ್ತವೆ. ಇವುಗಳಿಗೆ ಉತ್ತರವನ್ನು ಕಂಡುಕೊಳ್ಳಲು ಆತ ಸಾಮಗ್ರಿಯನ್ನು ಸಂಗ್ರಹಿಸುತ್ತಾನೆ. ಆತ ತೋರಿಸಬೇಕಾದ ಮುಖ್ಯವಾದ

---

[1] Eliot T.S. *Selected prose* (Ed. John Hayward), (1958). ಪುಟ 18.

[2] "The qualifications of a good critic are three: He must be an adept at experiencing, without eccentricities, the state of mind relevant to the work art he is judging. Secondly, he musrt be able to distinguish experience from one another as regards their less superficial features. Thirdly, he must be a sound judge of values."

- Richards I.A., *Principles of Literary Criticism*, p. 114. (1963)

ಮೊದಲನೆಯ ಅಂಶವೆಂದರೆ ಕವಿಯ ಅನುಭವ, ಕೃತಿಯಲ್ಲಿ ಎಷ್ಟರಮಟ್ಟಿಗೆ ಅಭಿವ್ಯಕ್ತಗೊಂಡಿದೆ, ಅದು ಎಷ್ಟರಮಟ್ಟಿಗೆ ಸಹೃದಯನಿಗೆ ಸಂವಹನಗೊಳ್ಳುತ್ತದೆ ಎಂಬುದು (Communicative aspect).

ಅದು ಜೀವನದ ಮೌಲ್ಯಗಳನ್ನು ಕಂಡುಕೊಳ್ಳುವುದಕ್ಕೆ ಎಷ್ಟರಮಟ್ಟಿಗೆ ಸಹಾಯಕವಾಗುತ್ತದೆಂಬುದು (Value aspect) ಎರಡನೆಯ ಅಂಶ. ಇದನ್ನು ಸಾಧಿಸಬೇಕಾದರೆ ವಿಮರ್ಶಕ ಒಂದು ಕಡೆಯಲ್ಲಿ ಅಪಾರವಾದ ಲೋಕಾನುಭವ, ಮತ್ತು ಅದು ಕೃತಿಯಲ್ಲಿ ಅಭಿವ್ಯಕ್ತಗೊಳ್ಳುವ ಸೃಷ್ಟಿ ಕ್ರಿಯೆಯ ಅಂತರಂಗದ ರಹಸ್ಯ, ಸಾಹಿತ್ಯದ ಪಾರಿಭಾಷಿಕ ವಿವರಗಳನ್ನು ತಿಳಿದಿರಬೇಕು; ಇನ್ನೊಂದು ಕಡೆ ಜೀವನದ ಮೌಲ್ಯಗಳನ್ನು ಪೂರ್ಣ ದೃಷ್ಟಿಯಿಂದ ಕಾಣಬಲ್ಲವನಾಗಿರಬೇಕು.

'ಮೌಲ್ಯ' ಎನ್ನುವುದು ಕೃತಿಕಾರನ ಅಥವಾ ವಿಮರ್ಶಕನ ವೈಯಕ್ತಿಕ ಜೀವನದ ಅನಿಸಿಕೆಗಳನ್ನೂ ಆತನ ನೈತಿಕ ದೃಷ್ಟಿಯನ್ನೂ ಅವಲಂಬಿಸಿದುದಲ್ಲ; ಸಮಷ್ಟಿ ಮನಸ್ಸಿನ ಸಾಮಾನ್ಯ ಅಂಶಗಳನ್ನು ಅರಗಿಸಿಕೊಂಡುದರ ಪರಿಣಾಮ. ಸಾಹಿತ್ಯವು ಹೇಗೆ ಕೃತಿಕಾರನ ವೈಯಕ್ತಿಕ ವೈಚಿತ್ರ್ಯವಲ್ಲವೋ ಹಾಗೆಯೇ ವಿಮರ್ಶೆಯೂ ವಿಮರ್ಶಕನ ಸಂಕುಚಿತ ವ್ಯಕ್ತಿತ್ವದ ಆಶೆ ಆಕಾಂಕ್ಷೆಗಳನ್ನು ಕೃತಿಯ ನೆಪದಲ್ಲಿ ತೂರಿಬಿಡುವುದರ ಮೂಲಕ ಕೈಕೊಳ್ಳುವ ಹೊಗಳಿಕೆಯೋ ತೆಗಳಿಕೆಯೋ ಅಲ್ಲ.

ಗಂಭೀರವಾದ ಸಮತೋಲನದ ಪರಿಪಕ್ವ ವಿಮರ್ಶೆಯಲ್ಲಿ ವಿಮರ್ಶಕ ಕಲಾನುಭವಕ್ಕೆ ತನ್ನನ್ನು ಸಮರ್ಪಿಸಿಕೊಳ್ಳುತ್ತಾನೆ. ಕೃತಿಕಾರನ ಅನುಭವವನ್ನು ಮುಂದೆ ಬಿಟ್ಟುಕೊಂಡು ತಾನು ಹಿಂದೆ ನಡೆಯುತ್ತಾನೆ. ತನ್ನ ಮನೋಧರ್ಮ ಮೆಚ್ಚುಲಾಗದುದನ್ನು ಕೂಡ, ಇದರಲ್ಲಿ ಸತ್ವ ಇದ್ದರೆ ಎತ್ತಿ ತೋರುವಂತಹ ಅಥವಾ ಒಂದು ವೇಳೆ ತಾನು ಮೆಚ್ಚಿದರೂ ಅದು ಮೌಲಿಕವಲ್ಲದಿದ್ದರೆ ಅದನ್ನು ತಿರಸ್ಕರಿಸುವಂತಹ ಕಠೋರ ವಸ್ತುನಿಷ್ಠೆ ಬೇಕು ವಿಮರ್ಶಕನಿಗೆ [1]. ಅಂದರೆ ಕಲಾವಿದನಂತೆ ವಿಮರ್ಶಕನೂ ತನ್ನನ್ನು ತಾನು ಇಲ್ಲಗೈದುಕೊಳ್ಳುವುದರ ಮೇಲೆಯೇ ಆತನ ಯೋಗ್ಯತೆ ನಿಂತಿದೆ.

ವಿಮರ್ಶೆ ಕಾವ್ಯಾನುಭವವನ್ನು ವಿಶ್ಲೇಷಿಸಿ ಅದನ್ನು ಅನ್ಯಹೃದಯ ವೇದ್ಯವಾಗುವಂತೆ ಮಾಡುವುದರಲ್ಲಿ ಮಾತ್ರ ತೃಪ್ತಿಯನ್ನು ಪಡೆಯುತ್ತದೆಯೇ? ಕೆಲವು ವೇಳೆ ಅಷ್ಟಕ್ಕೇ ಸೀಮಿತವಾಗಿರಬಹುದು. ಆದರೆ ವಿಮರ್ಶೆ ಇಷ್ಟಕ್ಕೇ ಇಲ್ಲದೆ ಇನ್ನೂ ಮುಂದೆ ಹೋಗಬೇಕಾಗುತ್ತದೆ. ಆ ಕಲಾತ್ಮಕ ಅನುಭವದ ಸ್ವರೂಪವೇನು? ಅದು ಓದುಗನ ಮೇಲೆ ಮಾಡುವ ಪರಿಣಾಮವೇನು? ಮೊದಲಾದ ಅಂಶಗಳನ್ನು ನೈತಿಕ ಸಾಮಾಜಿಕ ಧಾರ್ಮಿಕ ಹಿನ್ನೆಲೆಗಳಿಂದ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಸಹೃದಯ ಕೇವಲ ಕಲಾಜೀವಿಯಲ್ಲ; ಕಲಾಕೃತಿಯಿಂದ ಅನುಭವವನ್ನು ಪಡೆದ ಆತ ಮತ್ತೆ ಲೌಕಿಕ ಜಗತ್ತನ್ನು ಪ್ರವೇಶಿಸುತ್ತಾನೆ. ಆ ಅನುಭವದ ಪ್ರಭಾವ, ಆತನ ಜೀವನದ ಇತರ ರಂಗಗಳಲ್ಲಿಯೂ ಕಾಣಿಸಿಕೊಳ್ಳುತ್ತದೆ. ಒಂದು ನಾಟಕವನ್ನು ನೋಡಿ ರಂಗಮಂದಿರದಿಂದ ನಾವು

---

[1] "His rank a critic depends at least as much upon his ability to discount these personal peculiarities as upon any hypothetical impeccability of his actual response".

- Richards I.A., *Principles of Literary Criticism*, p. 224. (1963)

ಹೊರಗೆ ಬಂದರೆ ಅದರ ಪ್ರಭಾವ ಅಲ್ಲಿಗೇ ಮುಗಿದುಹೋಗಲಿಲ್ಲ. ಅಲ್ಲಿ ನಾವು ಪಡೆದ ಅನುಭವದ ಸಂಸ್ಕಾರ ನಮ್ಮ ಜೀವನದ ಇತರ ವ್ಯವಹಾರಗಳಲ್ಲಿ ಒಂದಲ್ಲ ಒಂದು ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಆದುದರಿಂದ ಒಂದು ಸಾಹಿತ್ಯಕೃತಿ ನಮ್ಮನ್ನು ತನ್ಮಯಗೊಳಿಸುತ್ತದೆ ಎಂಬುದಷ್ಟೇ ಮುಖ್ಯವಲ್ಲ; ಹಿಡಿದರೆ ರಾತ್ರಿ ಎಲ್ಲಾ ನಿದ್ದೆಗೆಟ್ಟು ಓದುವಂತಹ ಆಕರ್ಷಕತೆಯನ್ನು ಕೆಲವು ಕಾದಂಬರಿಗಳು ಪಡೆದಿವೆ ಎಂಬುದಷ್ಟೇ ಅವುಗಳ ಶ್ರೇಷ್ಠತೆಯ ಒರೆಗಲ್ಲಲ್ಲ; ಹಾಗೆ ತನ್ಮಯಗೊಳಿಸಿ ಏನನ್ನು ಕೊಡುತ್ತವೆ ಎಂಬುದೂ ಮುಖ್ಯ. ಅದು ಕೊಡುವ ದೃಷ್ಟಿ ವಿಕೃತವಾಗಿದ್ದರೆ ರಿಚರ್ಡ್ಸ್ ಹೇಳುವಂತೆ ಅದು ಕೆಟ್ಟ ಕಲೆ[1] ಇಲ್ಲಿ 'ಕೆಟ್ಟ' ಎನ್ನುವ ಮಾತು ಮೌಲ್ಯವನ್ನು ಕುರಿತದ್ದು; ಜೀವನದ ಎಲ್ಲ ರಂಗಗಳಲ್ಲಿಯೂ ಅದು ತಂದುಕೊಡುವ ದೃಷ್ಟಿಯನ್ನು ಕುರಿತದ್ದು.

ಆದುದರಿಂದ ಸಾಹಿತ್ಯವಿಮರ್ಶೆಯಲ್ಲಿ ಜೀವನದ ಎಲ್ಲ ರಂಗಗಳ ಮೌಲ್ಯಗಳನ್ನು ಕುರಿತ ವಿವೇಚನೆ ಅಗತ್ಯವಾಗುತ್ತದೆ. ನೈತಿಕ ನಿಯಮಗಳು, ಸಾಮಾಜಿಕ ಸಂಬಂಧಗಳು, ಧಾರ್ಮಿಕ ಆಚಾರಗಳು ಇವುಗಳನ್ನು ಕಲಾಕೃತಿ ಎಷ್ಟರಮಟ್ಟಿಗೆ ಅರಗಿಸಿಕೊಂಡಿದೆ ಮತ್ತು ಸಮಷ್ಟಿ ಮನಸ್ಸಿನ ಐತಿಹಾಸಿಕ ಪ್ರಜ್ಞೆಗೆ ಎಷ್ಟರಮಟ್ಟಿಗೆ ಸಂವಾದಿಯಾಗಿದೆ ಎನ್ನುವುದನ್ನು ವಿಮರ್ಶಕ ಪರಿಗಣಿಸದಿರುವುದು ಸಾಧ್ಯವಿಲ್ಲ:

"The experience of a poem is the experience both of a moment and of a life time"[2]

ಎಂದು ಹೇಳುವಂತೆ ಕಾವ್ಯಾನುಭವ ಆ ಕಾಲಕ್ಕೆ ಮಾತ್ರ ಸೀಮಿತವಾದದ್ದಲ್ಲ. ಇಡೀ ಜೀವನಪರ್ಯಂತ ಉಳಿದು ಬರುವ ಅಪೂರ್ವ ಅನುಭವ. ಇಂತಹ ಶಕ್ತಿಯನ್ನು ಕಲಾಕೃತಿ ಎಷ್ಟರಮಟ್ಟಿಗೆ ಪಡೆದಿದೆ ಎಂಬುದನ್ನು ತೋರಿಸಿಕೊಡುವುದರಲ್ಲಿ ವಿಮರ್ಶೆಗೆ ತೊಡಗಬೇಕಾಗುತ್ತದೆ.

ಪರಿಪೂರ್ಣವಾದ ವಿಮರ್ಶೆ ನೈತಿಕ, ಸಾಮಾಜಿಕ, ಮಾನಸಿಕ ಮೊದಲಾದ ಎಲ್ಲ ಅಂಶಗಳನ್ನೂ ಪರಿಶೀಲಿಸುತ್ತದೆಯಾದರೂ ಕೃತಿಯ ಸ್ವರೂಪ ಮತ್ತು ವಿಮರ್ಶಕನ ಮನೋಧರ್ಮಕ್ಕನುಗುಣವಾಗಿ ಇವುಗಳಲ್ಲಿ ಒಂದೊಂದು ಅಂಶಕ್ಕೆ ಹೆಚ್ಚು ಪ್ರಾಧಾನ್ಯ ಸಿಕ್ಕಬಹುದು. ಈ ದೃಷ್ಟಿಯಿಂದ ವಿಮರ್ಶೆಯ ವಿಧಾನದಲ್ಲಿ ಕೆಲವು ಮಾರ್ಗಗಳನ್ನು ಗುರುತಿಸಲಾಗಿದೆ. ತೌಲನಿಕ ವಿಮರ್ಶೆ, ಚಾರಿತ್ರಿಕ ವಿಮರ್ಶೆ, ತಾತ್ವಿಕ ವಿಮರ್ಶೆ, ತಾಂತ್ರಿಕ ವಿಮರ್ಶೆ ಇವೇ ಮೊದಲಾದ ಹಲವಾರು ವಿಭಾಗಗಳನ್ನು ಇಲ್ಲಿ ಕಾಣಬಹುದು. ನಿಜವಾಗಿ ನೋಡಿದರೆ ಇವು ವಿಭಾಗಗಳೇ ಅಲ್ಲ; ಒಳ್ಳೆಯ ವಿಮರ್ಶೆಯಲ್ಲಿ ಈ ಎಲ್ಲ ಅಂಶಗಳೂ ಒಂದಲ್ಲ ಒಂದು ಪ್ರಮಾಣದಲ್ಲಿ ಇದ್ದೇ ಇರುತ್ತವೆ.

ವಿಮರ್ಶೆಯ ಕೆಲವು ಪ್ರಕಾರಗಳನ್ನು ಗುರುತಿಸುವ ಪ್ರಯತ್ನ ನಡೆದಿದೆ. ಆಧುನಿಕ ಯುಗಮನೋಧರ್ಮದ ಸಂಕೀರ್ಣತೆ, ವೈಜ್ಞಾನಿಕ ದೃಷ್ಟಿಗಳು ಸಾಹಿತ್ಯದ ಮೇಲೆ ಅಂತೆಯೇ ಸಾಹಿತ್ಯ

---

[1] Richards I.A., *Principles of Literary Criticism*, p. 199. (1963)

[2] Eliot T. S., *Selected Prose*, (Ed. John Hayward). p. 48

ವಿಮರ್ಶೆಯ ಮೇಲೂ ಪರಿಣಾಮವನ್ನು ಬೀರಿವೆ; ಸಾಹಿತ್ಯ ಸೃಷ್ಟಿಯ ಹೊಸಹೊಸ ಆವಿಷ್ಕಾರಗಳಿಗೂ ವಿಮರ್ಶೆಯ ವಿನೂತನ ವಿಧಾನಗಳಿಗೂ ಕಾರಣವಾಗಿವೆ. ಹೊಸ ದೃಷ್ಟಿಯಿಂದ ಕೂಡಿದ ಆ ಎಲ್ಲ ವಿಧಿ ವಿಧಾನಗಳನ್ನೂ ಪ್ರಮುಖವಾದ ಕೆಲವು ಪ್ರಕಾರಗಳಾಗಿ ವಿಭಾಗಿಸುವ ಪ್ರಯತ್ನ ಪಾಶ್ಚಾತ್ಯರಲ್ಲಿ ನಡೆದಿದೆ. ಸಾಹಿತ್ಯದ ರೂಪವನ್ನೂ ಅಭಿವ್ಯಕ್ತಿಯ ರೀತಿಯನ್ನೂ ವಿಶ್ಲೇಷಿಸುವ ವಿಮರ್ಶೆಯನ್ನು, ತಂತ್ರನಿಷ್ಠ ಅಥವಾ ರೂಪನಿಷ್ಠ ವಿಮರ್ಶೆ (The Formalistic Approach) ಎಂದು ಕರೆಯಬಹುದು. ಕಲಾಕೃತಿಯ ಸಾಮಾಜಿಕ ಹೊಣೆಯನ್ನು ಮುಖ್ಯವಾಗಿ ಗಮನಿಸುವ ವಿಮರ್ಶೆ ಇನ್ನೊಂದು ಬಗೆ.

ಇದು ಸಮಾಜಶಾಸ್ತ್ರೀಯ ವಿಮರ್ಶೆ (The Sociological Approach). ಮನಶ್ಶಾಸ್ತ್ರ ಈಚೆಗೆ ವಿಮರ್ಶೆಯಲ್ಲಿ ಬಹಳ ಪ್ರಧಾನ ಪಾತ್ರ ವಹಿಸುತ್ತಿದೆ. ಇದನ್ನೆ ಪ್ರಧಾನವಾಗಿ ಉಳ್ಳದ್ದು ಮನಶ್ಶಾಸ್ತ್ರೀಯ ವಿಮರ್ಶೆ (The Psychological Approach). ಕೃತಿ ಪ್ರತಿ ಪಾದಿಸಿದ ನೈತಿಕ ಮೌಲ್ಯಗಳನ್ನು ಒರೆಗೆ ಹಚ್ಚಿ ಕೃತಿಯ ಬೆಲೆಯನ್ನು ಕಟ್ಟುವುದು ನೀತಿನಿಷ್ಠ ವಿಮರ್ಶೆ ಅಥವಾ ತಾತ್ವಿಕ ವಿಮರ್ಶೆ (The Moral Approach) - ಹೀಗೆ ಸ್ಥೂಲವಾದ ಈ ನಾಲ್ಕು ವಿಭಾಗಗಳಲ್ಲಿ ವಿಮರ್ಶೆಯ ಎಲ್ಲ ಬಗೆಗಳನ್ನೂ ಅಡಕಗೊಳಿಸಬಹುದೆಂದು ತೋರುತ್ತದೆ. ಅವುಗಳಲ್ಲಿ ಒಂದೊಂದನ್ನೂ ಕುರಿತು ಸಂಗ್ರಹವಾಗಿ ಒಂದೆರಡು ಮಾತುಗಳಲ್ಲಿ ವಿವೇಚಿಸಬಹುದು.

## 2.5. ಸಾರಾಂಶ

ಪಾಶ್ಚಿಮಾತ್ಯದೇಶಗಳಲ್ಲಿ ಸಾಹಿತ್ಯ ವಿಮರ್ಶೆಗೆ ಸುದೀರ್ಘ ಇತಿಹಾಸವಿದೆ. ಅರಿಸ್ಟಾಟಲ್‌ನಿಂದ ಹಿಡಿದು ಇತ್ತೀಚಿನ ರಿಚರ್ಡ್ಸ್‌ವರೆಗೆ ಇಲ್ಲಿ ವಿಮರ್ಶಾ ಪಂಥಗಳೇ ರೂಪುಗೊಂಡವು. ಸಾಹಿತ್ಯದ ಪ್ರತಿಯೊಂದು ಅಂಗವನ್ನೂ ಅವರೂ ವಿಮರ್ಶಾಪರವಾಗಿ ವಿವೇಚಿಸಿರುವ ಇತಿಹಾಸ ಅಲ್ಲಿ ಕಂಡುಬರುತ್ತದೆ. ಆ ವಿಮರ್ಶಾ ಇತಿಹಾಸವನ್ನೇ ನಮ್ಮ ಅಧ್ಯಯನ ಸೌಕರ್ಯಕ್ಕಾಗಿ ಇಲ್ಲಿ ತಿಪ್ಪೇರುದ್ರಸ್ವಾಮಿಯವರು ವಿವಿಧ ಮಾರ್ಗಗಳಾಗಿ ಒಡೆದು ವಿವರಿಸುವ ಪ್ರಯತ್ನ ಮಾಡಿದ್ದಾರೆ. ಇದರಿಂದ ವಿದ್ಯಾರ್ಥಿಗಳಿಗೆ ವಿಮರ್ಶೆಯ ಬಿಟ್ಟರೆ ಸ್ವರೂಪ ಕಾರ್ಯವಿಧಾನದ ಪರಿಚಯ ಲಭಿಸಿದರೆ ಸಾಕು.

## 2.6. ಸ್ವಯಂ ಅಭ್ಯಾಸ

ಈ ಪ್ರಶ್ನೆಗಳಿಗೆ ಉತ್ತರ ಬರೆದು ಅಭ್ಯಾಸ ಮಾಡಿ

1. ವಿಮರ್ಶೆಯ ಇತಿಹಾಸದ ಸ್ಥೂಲನೋಟ ನೀಡಿ.

..........................................................................................................

..........................................................................................................

